# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಏಪ್ರಿಲ್ ೧೪, ೨೦೧೬ (ಚೈತ್ರ ೨೫, ಶಕ ವರ್ಷ ೧೯೩೮)<br>Bengaluru, Thursday, April 14, 2016 (Chaithra 25, Shaka Varsha 1938) | ಸಂಚಿಕೆ ೧೫<br>Issue 15 |
| --- | --- | --- |


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಹಕಾರ ಸಚಿವಾಲಯ

**ವಿಷಯ:** ಟಿ.ಎ.ಪಿ.ಸಿ.ಎಂ.ಎಸ್. ಸಾಗರ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇದರ 2010–11 ರಿಂದ 2012–13 ನೇ ಸಾಲುಗಳ ಪರಿಶೋಧಿತ ಲೆಕ್ಕಪತ್ರಗಳನ್ನು ಮರು ಲೆಕ್ಕಪರಿಶೋಧನೆಗೆ ಒಳಪಡಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ ಪತ್ರ ಸಂಖ್ಯೆ:ತಪಫ/ಬೆಂಪಿವಿಶಿ/09/2014–15, ದಿನಾಂಕ:28–10–2015 ಹಾಗೂ ದಿನಾಂಕ:18–12–2015

**ಪ್ರಸ್ತಾವನೆ :**

ಮೇಲೆ ಓದಲಾದ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ ಪತ್ರಗಳಲ್ಲಿ ಟಿ.ಎ.ಪಿ.ಸಿ.ಎಂ.ಎಸ್. ಸಾಗರ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇದರ 2010–11 ರಿಂದ 2012–13 ನೇ ಸಾಲಿನ ಶಾಸನಬದ್ಧ ಲೆಕ್ಕಪರಿಶೋಧನಾ ವರದಿಯಲ್ಲಿ ಹಲವಾರು ನ್ಯೂನತೆಗಳಿರುವುದರಿಂದ 2011–12 ಮತ್ತು 2012–13 ನೇ ಸಾಲಿನ ಲೆಕ್ಕಪತ್ರಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 63(13–ಎ) ರಡಿ ಮರುಪರಿಶೀಲನೆಗೆ ಅಥವಾ ಕಲಂ 63 (13) ರಡಿ ಮರುಲೆಕ್ಕಪರಿಶೋಧನೆ ಒಳಪಡಿಸಲು ಕೋರಿ, ಈ ಕೆಳಕಂಡ ನ್ಯೂನತೆಗಳನ್ನು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ತಿಳಿಸಿರುತ್ತಾರೆ.

1) 2010–11ನೇ ಸಾಲಿನಲ್ಲಿ ದಾಸ್ತಾನು ಮತ್ತು ಹಣ ದುರುಪಯೋಗದ ಬಾಬ್ತು ಕಾಯ್ದಿರಿಸಲಾದ ರೂ 8,56,377.00 ಗಳನ್ನು ದಿ:19–06–2013 ಮತ್ತು 04–07–2013 ರಂದು ವಸೂಲಾಗಿರುವುದನ್ನು 2012–13 ನೇ ಸಾಲಿನಲ್ಲಿ ಲಾಭಕ್ಕೆ ಪರಿಗಣಿಸಲು ದಿ:27–01–2014 ರಂದು ಜರುಗಿದ ಆಡಳಿತ ಮಂಡಳಿ ಸಭೆಯಲ್ಲಿ ತೀರ್ಮಾನಿಸಲಾಗಿದೆ. ಈ ಮೊಬಲಗು 2013–14ನೇ ಸಾಲಿನಲ್ಲಿ ವಸೂಲಾಗಿರುವುದರಿಂದ ಇದನ್ನು 2013–14 ನೇ ಸಾಲಿನ ಲಾಭಕ್ಕೆ ಪರಿಗಣಿಸಬೇಕಾಗಿದ್ದು, 2012–13 ನೇ ಸಾಲಿನಲ್ಲಿ ಲಾಭಕ್ಕೆ ಪರಿಗಣಿಸಿರುವುದು ಲೋಪವಾಗಿರುತ್ತದೆ ಹಾಗೂ ದಾಸ್ತಾನು ಕೊರತೆಯ ರೂ 17,12,753 ಗಳಿದ್ದರೂ ಸಹ ಶೇಕಡ 50 ಎಂದರೆ ರೂ 8,56,377 ಗಳನ್ನು ಸಂಘದವರು ಕಾಯ್ದಿರಿಸಿರುವ ಕ್ರಮವನ್ನು ಒಪ್ಪಿರುವುದು ಸರಿಯಾದ ಕ್ರಮವಲ್ಲ.

2) 40 ಸದಸ್ಯರಿಂದ ದಾಸ್ತಾನು ಮುಂಗಡದ ಬಾಬ್ತು ಅಸಲು ಬಡ್ಡಿ ಸೇರಿ ಒಟ್ಟು ರೂ 2,76,15,668 ಗಳನ್ನು ಸಂಸ್ಥೆಯು ನೀಡಿದ್ದು, ಈ ಮೊಬಲಗು ದೀರ್ಘಕಾಲದಿಂದ ಸುಸ್ತಿಯಾಗಿದ್ದರೂ ಸಹ 2010–11 ಮತ್ತು 2011–12ನೇ ಸಾಲಿನ ಲೆಕ್ಕಪರಿಶೋಧನೆ ನಿರ್ವಹಿಸಿದ ಲೆಕ್ಕಪರಿಶೋಧಕರು ಸೂಕ್ತ ಹೊಣೆಗಾರಿಕೆಯೊಂದಿಗೆ ಲೆಕ್ಕಪರಿಶೋಧನಾ ವರದಿಯಲ್ಲಿ ವಿಶ್ಲೇಷಿಸದೇ ಇರುವುದು ತಮ್ಮ ವರದಿ ಪುಟ 20 ರಲ್ಲಿ ಕೇವಲ 17 ಪ್ರಕರಣಗಳಲ್ಲಿ ಮಾಲು ಇಲ್ಲದೇ ಇದ್ದರೂ ಸಹ ಮುಂಗಡ ಬಾಕಿ ಇರುವ ಬಗ್ಗೆ ಮಾತ್ರ ವಿಮರ್ಶಿಸಿರುತ್ತಾರೆ.

3) 2010–11 ರಿಂದ 2012–13 ರ ಅವಧಿಯಲ್ಲಿ ಮಾರಾಟ ಶಾಖೆಯಲ್ಲಿ ಕೆಲವು ಉದ್ರಿ ಬಿಲ್ಲುಗಳನ್ನು ನಗದು ಪುಸ್ತಕಕ್ಕೆ ತೆಗೆದುಕೊಂಡಿಲ್ಲದಿರುವುದು ಹಾಗೂ ಸಪ್ಲೈ ಬಿಲ್ಲುಗಳ ಬಾಬ್ತು ರೈತರ ವಂತಿಕೆಯನ್ನು ನಗದು ಪುಸ್ತಕಕ್ಕೆ ಜಮಾ ಪಡಿಸಿಲ್ಲದಿರುವುದು ಹಾಗೂ ದಾಸ್ತಾನು ಸರಬರಾಜು ಮಾಡಿದ ಇಲಾಖೆಗಳೊಂದಿಗೆ ಲೆಕ್ಕಗಳ ಸಮನ್ವಯ ಮಾಡಿಕೊಳ್ಳದೇ ಇರುವುದರಿಂದ ಮಾರಾಟ ಶಾಖೆಯಲ್ಲಿ ದುರುಪಯೋಗ ಬಾಬ್ತು ಜವಾಬ್ದಾರಿ ನಿಗದಿಪಡಿಸುವಲ್ಲಿ ಲೋಪವುಂಟಾಗಿರುತ್ತದೆ.

4) 2012–13ನೇ ಸಾಲಿನಲ್ಲಿ ರೂ 14,26,957–00 ಗಳ ಭವಿಷ್ಯ ನಿಧಿ ಮತ್ತು ಭದ್ರತಾ ಠೇವಣಿ ಇದ್ದರೂ ಸಹ ಈ ಬಾಬ್ತು ಬಡ್ಡಿಯನ್ನು ಕಾಯ್ದಿರಿಸಿ ವರ್ಗಾಯಿಸದೇ ಇರುವ ಕ್ರಮವನ್ನು ಲೆಕ್ಕಪರಿಶೋಧಕರು ಒಪ್ಪಿ ದೃಢೀಕರಿಸಿರುವ ಕ್ರಮವು ಸಮಂಜಸವಾಗಿರುವುದಿಲ್ಲ.

5) 2012–13 ರ ಆರ್ಥಿಕ ತಃಖ್ತೆಯಲ್ಲಿ ಶ್ರೀ ಚಂದ್ರಪ್ರಸಾದ್ ಅಮಾನತ್ ಠೇವಣಿ ಎಂದು ಇದ್ದು ಇದು ಅಮಾನತ್ ಠೇವಣಿ ಎಂದಾಗಬೇಕು.

ಮೇಲೆ ವಿವರಿಸಿರುವ ಅಂಶಗಳಂತೆ 2010–11 ರಿಂದ 2012–13 ರ ಅವಧಿಯ ಲೆಕ್ಕಪತ್ರಗಳನ್ನು ಮರುಲೆಕ್ಕಪರಿಶೋಧನೆಗೆ ಒಳಪಡಿಸುವ ಅಗತ್ಯವಿರುವುದರಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 63 (13) ರಂತೆ ಸೂಕ್ತ ಆದೇಶವನ್ನು ಹೊರಡಿಸುವಂತೆ ಹಾಗೂ ಈ ಕಾರ್ಯಕ್ಕಾಗಿ ಶ್ರೀ ವಿ.ಸಿ. ಶಿವಪ್ಪ, ಹಿರಿಯ ಲೆಕ್ಕಪರಿಶೋಧಕರು, ಹೊಸನಗರ, ಶಿವಮೊಗ್ಗ ಜಿಲ್ಲೆ ಇವರನ್ನು ಮರುಲೆಕ್ಕಪರಿಶೋಧನೆ ನಿರ್ವಹಿಸಲು ನಿಯೋಜಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 234 ಸಂಮಾಸ 2015, ಬೆಂಗಳೂರು, ದಿನಾಂಕ: 27–01–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಟಿ.ಎ.ಪಿ.ಸಿ.ಎಂ.ಎಸ್. ಸಾಗರ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇದರ 2010–11 ರಿಂದ 2012–13 ನೇ ಸಾಲುಗಳ ಪರಿಶೋಧಿತ ಲೆಕ್ಕಪತ್ರಗಳನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ, 1959ರ ಪ್ರಕರಣ 63 (13) ರೀತ್ಯ ಹಿರಿಯ ಲೆಕ್ಕಪರಿಶೋಧಕರು, ಹೊಸನಗರ, ಶಿವಮೊಗ್ಗ ಜಿಲ್ಲೆ ಇವರನ್ನು ನೇಮಿಸಿ, ಮರು ಲೆಕ್ಕಪರಿಶೋಧನೆ ಮಾಡಲು ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 99**

**SC. 50**

## ಸಹಕಾರ ಸಚಿವಾಲಯ

**ವಿಷಯ:** ರಾಜಾಜಿನಗರ ಸಹಕಾರ ಸಂಘ ನಿ., ಬೆಂಗಳೂರು ಇದರ 2011–12 ಮತ್ತು 2012–13 ನೇ ಸಾಲುಗಳ ಲೆಕ್ಕಪತ್ರಗಳನ್ನು ಮರು ಲೆಕ್ಕಪರಿಶೋಧನೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಇಲಾಖೆ ಇವರ ಪತ್ರಗಳ ಸಂಖ್ಯೆ:ತಪಫ/ ಬೆಂವಿನ/ 58/2014–15, ದಿ:24–09–2015 ಮತ್ತು ದಿನಾಂಕ:01–12–2015

**ಪ್ರಸ್ತಾವನೆ :**

ಮೇಲೆ ಓದಲಾದ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರ ಪತ್ರಗಳಲ್ಲಿ ರಾಜಾಜಿನಗರ ಸಹಕಾರ ಸಂಘ ನಿ., ಬೆಂಗಳೂರು ಇದರ 2011–12 ಮತ್ತು 2012–13ನೇ ಸಾಲಿನ ಲೆಕ್ಕಪತ್ರಗಳನ್ನು ಮರುಲೆಕ್ಕಪರಿಶೋಧನೆಗೆ ಒಳಪಡಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ಲೋಪ ದೋಷಗಳು ಕಂಡು ಬಂದಿರುವುದಾಗಿ ತಿಳಿಸಿರುತ್ತಾರೆ.

- ದಿನಾಂಕ:17–10–2011 ರಂದು ರಸೀದಿ ಸಂಖ್ಯೆ:497, 498, 499, 500 ಗಳಲ್ಲಿ ತಲಾ ಒಂದು ಲಕ್ಷದಂತೆ ಒಟ್ಟು 4 ಲಕ್ಷ ಸ್ವೀಕೃತವಾದ ಮುಂಗಡವನ್ನು ಎರಡು ಬಾರಿ ಖರ್ಚು ಹಾಕಿದ್ದು, ಸ್ವೀಕೃತವಾದ ಮೊಬಲಗಿಗಿಂತ ರೂ 4.00 ಲಕ್ಷಗಳನ್ನು ಹೆಚ್ಚಿಗೆ ಖರ್ಚು ಹಾಕಲಾಗಿರುತ್ತದೆ.
- ದಿನಾಂಕ:18–06–2011 ರಂದು 8 ರಸೀದಿಗಳ ಸಂಬಂಧ ರೂ 5,60,000/– ಜಮಾ ಬಂದ ಬಾಬ್ತು ದಿನಾಂಕ:07–07–2011 ರಂದು ನಗದು ಪುಸ್ತಕ ಪುಟ ಸಂಖ್ಯೆ: 46, ಓಚರ್ ಸಂಖ್ಯೆ:129 ರಂತೆ ರೂ 5,70,000/– ಗಳನ್ನು ಮುಂಗಡ ವಾಪಸ್ ಮಾಡಿರುವುದಾಗಿ ಖರ್ಚು ಹಾಕಿದ್ದು, ರೂ 10,000–00 ಗಳನ್ನು ಹೆಚ್ಚು ಖರ್ಚು ಹಾಕಲಾಗಿದೆ.
- ದಿನಾಂಕ:06–08–2011 ರಂದು ನಗದು ಪುಸ್ತಕ ಪುಟ ಸಂಖ್ಯೆ:61, ಓಚರ್ ಸಂಖ್ಯೆ:171ರ ರೀತ್ಯಾ ಮುಂಗಡವನ್ನು ವಾಪಸ್ ಮಾಡಿರುವುದಾಗಿ ರೂ 3,00,000–00 ಗಳನ್ನು ಖರ್ಚು ಹಾಕಿದ್ದು, ಓಚರ್‌ಗೆ ವ್ಯವಸ್ಥಾಪಕರ ಸಹಿ ಮಾತ್ರ ಇದ್ದು, ಪ್ರಧಾನ ವ್ಯವಸ್ಥಾಪಕರ ಸಹಿ ಇರುವುದಿಲ್ಲ ಹಾಗೂ ಜಮಾ ರಸೀದಿಗಳನ್ನು ಲಗತ್ತಿಸಿರುವುದಿಲ್ಲ.
- ದಿನಾಂಕ:08–08–2011 ರಂದು ನಗದು ಪುಸ್ತಕ ಪುಟ ಸಂಖ್ಯೆ: 63, ಓಚರ್ ಸಂಖ್ಯೆ:172 ರ ರೀತ್ಯಾ ಮುಂಗಡವನ್ನು ವಾಪಸ್ ಮಾಡಿರುವುದಾಗಿ ರೂ 6,00,000–00 ಗಳನ್ನು ಖರ್ಚು ಹಾಕಿದ್ದು, ಓಚರ್ಗೆ ವ್ಯವಸ್ಥಾಪಕರ ಸಹಿ ಮಾತ್ರ ಇದ್ದು, ಪ್ರಧಾನ ವ್ಯವಸ್ಥಾಪಕರ ಸಹಿ ಇರುವುದಿಲ್ಲ ಹಾಗೂ ಜಮಾ ರಸೀದಿಗಳನ್ನು ಲಗತ್ತಿಸಿರುವುದಿಲ್ಲ.
- ದಿನಾಂಕ:12–08–2011 ರಂದು ನಗದು ಪುಸ್ತಕ ಪುಟ ಸಂಖ್ಯೆ 66, ಓಚರ್ ಸಂಖ್ಯೆ 186 ರೀತ್ಯಾ ರೂ 10,80,000–00 ಮತ್ತು ಓಚರ್ ಸಂಖ್ಯೆ : 187 ರೀತ್ಯಾ ರೂ 20,000–00 ಗಳ ಮುಂಗಡವನ್ನು ವಾಪಸ್ ಮಾಡಿರುವುದಾಗಿ ಖರ್ಚು ಹಾಕಿದ್ದು, ಈ ಖರ್ಚಿಗೆ ಓಚರ್, ಜಮಾ ರಸೀದಿಗಳು ಲಭ್ಯವಿರುವುದಿಲ್ಲ.
- ದಿನಾಂಕ:20–08–2011 ರಂದು ನಗದು ಪುಸ್ತಕ ಪುಟ ಸಂಖ್ಯೆ 70, ಓಚರ್ ಸಂಖ್ಯೆ 70, ಓಚರ್ ಸಂಖ್ಯೆ 204 ರಂತೆ ರೂ 15,50,000–00 ಗಳ ಮುಂಗಡವನ್ನು ವಾಪಸ್ ಮಾಡಿರುವುದಾಗಿ ಖರ್ಚು ಹಾಕಿದ್ದು, ಇದಕ್ಕೆ ಓಚರ್, ಜಮಾ ರಸೀದಿಗಳು ಲಭ್ಯವಿರುವುದಿಲ್ಲ.
- ದಿನಾಂಕ:14–02–2012 ರಂದು ನಗದು ಪುಸ್ತಕ ಪುಟ ಸಂಖ್ಯೆ : 161 ರಲ್ಲಿ ಓಚರ್ ಸಂಖ್ಯೆ 671 ರಂತೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ರಾಜಾಜಿನಗರ 5ನೇ ಶಾಖೆಯಲ್ಲಿ ಸಂಘದ ಚಾಲ್ತಿ ಖಾತೆ ಸಂಖ್ಯೆ 31251252826 ಖಾತೆಗೆ ಜಮಾ ಮಾಡಿರುವುದಾಗಿ ರೂ 3,52,000–00 ಗಳನ್ನು ಖರ್ಚು ಹಾಕಲಾಗಿದೆ.ವಾಸ್ತವವಾಗಿ ದಿನಾಂಕ:13–02–2012ರ ಬ್ಯಾಂಕ್ ಚಲನ್‌ನಂತೆ ಬ್ಯಾಂಕಿಗೆ ರೂ 35,200–00 ಗಳನ್ನು ಮಾತ್ರ ಜಮಾ ಮಾಡಲಾಗಿದೆ. ಬ್ಯಾಂಕಿನ ದಿನಾಂಕ:01–02–2012 ರಿಂದ 07–03–2012ರ ಅವಧಿಯ ಪಾಸ್ ಶೀಟ್‌ನಂತೆಯೂ ಸಹ ದಿನಾಂಕ:13–02–2012 ರಂದು ರೂ 35,200–00

ಗಳನ್ನು ಮಾತ್ರ ಬ್ಯಾಂಕಿಗೆ ಜಮಾ ಆಗಿರುವುದು ಕಂಡು ಬಂದಿರುತ್ತದೆ. ಇದರಿಂದಾಗಿ ಬ್ಯಾಂಕಿಗೆ ವಾಸ್ತವವಾಗಿ ಪಾವತಿಸಿರುವ ಮೊತ್ತಕ್ಕಿಂತ ರೂ 3,16,800–00 ಗಳ ಹೆಚ್ಚು ಮೊತ್ತವನ್ನು ನಗದು ಪುಸ್ತಕದಲ್ಲಿ ಸುಳ್ಳು ಖರ್ಚು ಹಾಕಿರುವುದು ಕಂಡು ಬಂದಿರುತ್ತದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸಂಘದ 2011–12 ಮತ್ತು 2012–13 ನೇ ಸಾಲಿನ ಲೆಕ್ಕ ಪತ್ರಗಳನ್ನು ಮರು ಲೆಕ್ಕಪರಿಶೋಧನೆ ಮಾಡಲು ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ರಾಜಾಜಿನಗರ ಸಹಕಾರ ಸಂಘ ನಿ., ಬೆಂಗಳೂರು ಇದರ 2011–12 ಮತ್ತು 2012–13 ನೇ ಸಾಲುಗಳ ಲೆಕ್ಕಪತ್ರಗಳನ್ನು ಮರು ಲೆಕ್ಕಪರಿಶೋಧನೆಗೆ ಒಳಪಡಿಸುವುದು ಸೂಕ್ತವೆಂದು ಸರ್ಕಾರವು ಭಾವಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 261 ಸಿಎಲ್‌ಎಂ 2015, ಬೆಂಗಳೂರು, ದಿನಾಂಕ: 04–02–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, **ರಾಜಾಜಿನಗರ ಸಹಕಾರ ಸಂಘ ನಿ., ಬೆಂಗಳೂರು ಇದರ 2011–12 ಮತ್ತು 2012–13 ನೇ ಸಾಲುಗಳ ಲೆಕ್ಕಪತ್ರಗಳನ್ನು ಮರು ಲೆಕ್ಕಪರಿಶೋಧನೆ ಹಿರಿಯ ಲೆಕ್ಕಪರಿಶೋಧಕರು, ಸಹಾಯಕ ನಿರ್ದೇಶಕರ ಕಛೇರಿ, ಬೆಂಗಳೂರು 1ನೇ ವೃತ್ತ ರವರನ್ನು ನಿಯೋಜಿಸಿ** ಪುನರ್ ಲೆಕ್ಕಪರಿಶೋಧನೆ ನಡೆಸಲು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ, 1959, ಕಲಂ 63 (13) ರೀತ್ಯ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರಿಗೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾದಾಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ–3,

ಸಹಕಾರ ಇಲಾಖೆ.

**PR. 151**

**SC. 50**

## ಕಂದಾಯ ಸಚಿವಾಲಯ

**ವಿಷಯ:** ದಾವಣಗೆರೆ ಜಿಲ್ಲೆ, ಜಗಳೂರು ತಾಲ್ಲೂಕಿನ ಕೆಲವು ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿನ 84.35 ಎಕರೆ ಸರ್ಕಾರಿ ಜಮೀನನ್ನು ಪವನ ವಿದ್ಯುತ್ ಯೋಜನೆಯ ಅಭಿವೃದ್ಧಿಗಾಗಿ ಮೆ.ವಿಷ್ ವಿಂಡ್ ಕಂಪನಿ, ಬೆಂಗಳೂರು ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು

**ಓದಲಾಗಿದೆ:** ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ/ಸಿಆರ್/19/2015–16, ದಿನಾಂಕ: 29.07.2015.

**ಪ್ರಸ್ತಾವನೆ:**

ಮೇಲೆ ಓದಲಾದ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರು ದಿನಾಂಕ: 29.07.2015ರ ಪತ್ರದಲ್ಲಿ, ದಾವಣಗೆರೆ ಜಿಲ್ಲೆ ಜಗಳೂರು ತಾಲ್ಲೂಕಿನ ಕೆಲವು ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 84.35 ಎಕರೆ ಸರ್ಕಾರಿ ಜಮೀನನ್ನು ಪವನ ವಿದ್ಯುತ್ ಯೋಜನೆಯ ಅಭಿವೃದ್ಧಿಗಾಗಿ 30 ವರ್ಷಗಳ ಗುತ್ತಿಗೆ ಆಧಾರದ ಮೇಲೆ ಮೆ: ವಿಷ್ ವಿಂಡ್ ಕಂಪನಿ, ಬೆಂಗಳೂರು ಇವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 19(3) ರನ್ವಯ ಮಂಜೂರು ಮಾಡುವ ಕುರಿತು ಶಿಫಾರಸ್ಸು ಮಾಡಿದ್ದಾರೆ.

ಜಿಲ್ಲಾಧಿಕಾರಿಗಳು, ದಾವಣಗೆರೆ ಇವರು ತಮ್ಮ ದಿ.17.06.2015ರ ಪತ್ರದಲ್ಲಿ ಪ್ರಸ್ತಾಪಿತ ಜಮೀನುಗಳು ಹುಲ್ಲುಬನ್ನಿ, ಲೀಲಾವು ಖರಾಬ್, ಗೋಮಾಳ, ಶೇಂದಿವನದ ತರಹದ ಜಮೀನುಗಳಾಗಿದ್ದು, ಮಂಜೂರಾತಿ ಕೋರಿರುವ ಜಮೀನುಗಳು ಗುಡ್ಡದ ನೆತ್ತಿಯ ತುದಿ ಭಾಗದಲ್ಲಿದ್ದು, ಸದರಿ ಪ್ರದೇಶವು ಸುಮಾರು 50 ರಿಂದ 60 ಮೀಟರ್ ಎತ್ತರದಲ್ಲಿದ್ದು, ಕಲ್ಲುಬಂಡೆಗಳಿಂದ ಕೂಡಿದ್ದು, ಜಾನುವಾರುಗಳು ಮೇಯಲು ಯೋಗ್ಯವಾಗಿರುವುದಿಲ್ಲವೆಂದು, ಬಗರ್ ಹುಕುಂ ಸಾಗುವಳಿಯಿಂದ ಮುಕ್ತವಾಗಿರುತ್ತದೆಂದು, ಹಾಗೂ ಸದರಿ ಜಮೀನಿನಲ್ಲಿ ಯಾವುದೇ ಬೆಲೆಬಾಳುವ ಗಿಡ ಮರಗಳು, ಐತಿಹಾಸಿಕ ಪ್ರಾಚೀನ ದೇವಸ್ಥಾನಗಳು, ಭಾರಿ ಪ್ರಮಾಣದ ವಿದ್ಯುತ್ ತಂತಿ ಮತ್ತು ಕಂಬಗಳು ಇರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಮುಂದುವರೆದು, ಸರ್ಕಾರಿ ಆದೇಶ ಸಂಖ್ಯೆ:ಇಎನ್ 302 ಎನ್‌ಸಿಇ 2006 ದಿನಾಂಕ: 16.10.2006ರಲ್ಲಿ ಇಂಧನ ಇಲಾಖೆಯು ಮೆ.ವಿಷ್ ವಿಂಡ್ ಇನ್‌ಫ್ರಾಸ್ಟ್ರಕ್ಚರ್ ಲಿಮಿಟೆಡ್ ಇವರಿಗೆ ದಾವಣಗೆರೆ ಸೇರಿದಂತೆ ಕೋಲಾರ, ತುಮಕೂರು, ಬೆಂಗಳೂರು ಗ್ರಾಮಾಂತರ, ಹಾಸನ, ಶಿವಮೊಗ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಒಟ್ಟು 477.36 ಮೆಘಾವ್ಯಾಟ್ ವಿದ್ಯುತ್ ವಿಂಡ್ ಮಿಲ್‌ಗಳನ್ನು ಸ್ಥಾಪಿಸಲು ಅನುಮತಿಯನ್ನು ನೀಡಿದೆ.

ಉಪ ನೋಂದಣಾಧಿಕಾರಿ, ದಾವಣಗೆರೆ ಇವರು ದಿನಾಂಕ:17.06.2015ರಂದು ವರದಿ ಮಾಡಿರುವಂತೆ ದಾವಣಗೆರೆ ಜಿಲ್ಲೆ, ಜಗಳೂರು ತಾಲ್ಲೂಕಿನ ಹನುಮಂತಾಪುರ, ರಂಗಾಪುರ, ತಮಲೇಹಳ್ಳಿ, ಹೊಸಕೆರೆ, ಕೆಚ್ಚೇನಹಳ್ಳಿ ಇತ್ಯಾದಿ ಗ್ರಾಮಗಳ ವಿವಿಧ ಸರ್ವೆ ನಂಬರುಗಳಲ್ಲಿನ ಖುಷ್ಕಿ ಜಮೀನಿನ ಮಾರುಕಟ್ಟೆ ಬೆಲೆಯು ಪ್ರತಿ ಎಕರೆಗೆ ರೂ.55,000/–ರಿಂದ ರೂ.75,000/–ರಷ್ಟಿದೆಯೆಂದು ತಿಳಿಸಿದ್ದಾರೆ. ಸದರಿ ಮೌಲ್ಯದ ಸರಾಸರಿ ಬೆಲೆಯನ್ನು ಆಧರಿಸಿ ಲೆಕ್ಕಾಚಾರ ಮಾಡಿದಾಗ 84.35 ಎಕರೆ ಜಮೀನಿಗೆ ಮಾರುಕಟ್ಟೆ ಬೆಲೆಯು ಸುಮಾರು ರೂ. 55,17,000/–ಗಳಷ್ಟಾಗುತ್ತದೆ.

ಮುಂದುವರೆದು, ಈ ಪ್ರಸ್ತಾವನೆ ಬಗ್ಗೆ ಇಂಧನ ಇಲಾಖೆಯ ಅಭಿಪ್ರಾಯವನ್ನು ಕೋರಲಾಗಿ, ದಿನಾಂಕ:05.10.2015ರಂದು ಇಲಾಖೆಯು ಈ ಕೆಳಕಂಡಂತೆ ಅಭಿಪ್ರಾಯ ನೀಡಿರುತ್ತದೆ.

"The land required for developing the wind power project depends on the following criteria:

a) The length of the Power Evacuation line i.e., availability of nearest feasible KPTCL station.

b) The capacity of individual Wind Turbine Generators viz., 800 kw. 1500 kw, 2000 kw or 2100 kw.

c) The type of land terrain available for development i.e., if developed on a ridge the approach road length will be more.

d) The land is required for construction of road for connecting the different Wind Turbines and varies from 300 mtr. to 400 mtr.

e) The land is required of construction of road for approaching the site from nearest available road for transportation of machinery and for regular movement for maintenance of the project.

f) in addition to above the land is also required for construction for auxiliary building like office Building, Rest room for employees and storage space for keeping spare parts etc.,

in view of the abover, and the absence of any thumb rule, the land requirement varies from location to location and the approximate land requirement is 2.5 to 3.5 acre per MW for wind power project.

ಸದರಿ ಕಂಪನಿಯು ಉತ್ಪಾದನೆ ಮಾಡಲು ಉದ್ದೇಶಿಸಿರುವ ವಿದ್ಯುತ್ 19.2 ಮೆಗಾ ವ್ಯಾಟ್ ಆಗಿರುತ್ತದೆ. ಇಂಧನ ಇಲಾಖೆಯ ಮೇಲ್ಕಂಡ ಅಭಿಪ್ರಾಯದ ಪ್ರಕಾರ ಪ್ರತಿ ಮೆಗಾ ವ್ಯಾಟ್‌ಗೆ ಗರಿಷ್ಠ 305 ಎಕರೆಯಂತೆ ಲೆಕ್ಕಾಚಾರ ಮಾಡಿದರೂ ಸುಮಾರು 67 ಎಕರೆ ಜಮೀನು ಈ ಯೋಜನೆಗೆ ಅವಶ್ಯವಿರುತ್ತದೆ. ಅದರಂತೆ ಸದರಿ ಜಮೀನಿನ ಅವಶ್ಯಕತೆಯನ್ನು ಸೀಮಿತಗೊಳಿಸಿ 67 ಎಕರೆ ಜಮೀನನ್ನು ಮಂಜೂರು ಮಾಡಲು ಪರಿಗಣಿಸಿದೆ.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕಶವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 48 ಎಲ್‌ಜಿಸಿ 2015, ಬೆಂಗಳೂರು, ದಿನಾಂಕ:05.01.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆ ಜಗಳೂರು ತಾಲ್ಲೂಕಿನ ಹನುಮಂತಾಪುರ, ರಂಗಾಪುರ, ತಮಲೀಹಳ್ಳಿ, ಹೊಸಕೆರೆ, ಕೆಚ್ಚೇನಹಳ್ಳಿ, ಮೆರಿಕಟ್ಟೆ, ಗೌಡಗೊಂಡನಹಳ್ಳಿ ಮತ್ತು ವೀರವ್ವನಾಗ್ತಿಹಳ್ಳಿ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿನ ಒಟ್ಟು 67.00 (ಅರವತ್ತೇಳು) ಎಕರೆ ಸರ್ಕಾರಿ ಜಮೀನಿನಲ್ಲಿ ಬರುವ ಗೋಮಾಳ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಹಾಗೂ ಸದರಿ ವಿಸ್ತೀರ್ಣದಲ್ಲಿ ಅವಶ್ಯವಿರುವ ಕಡೆ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 68ರಂತೆ ಸೂಕ್ತ ವಿಧಾನ ಅನುಸರಿಸಿ ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 19 ಮತ್ತು ನಿಯಮ 22ಎ ರನ್ವಯ ಮಾರುಕಟ್ಟೆ ಬೆಲೆಯ ಶೇ.30ರಷ್ಟು ಗುತ್ತಿಗೆ ಮೊತ್ತವನ್ನು ನಿಗಧಿಪಡಿಸಿ ಹಾಗೂ ಸದರಿ ಗುತ್ತಿಗೆ ಮೊತ್ತವನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಶೇ.10ರಂತೆ ಹೆಚ್ಚಿಸುವ ಷರತ್ತಿಗೊಳಪಟ್ಟು, ಮೆ: ವಿಷ್ ವಿಂಡ್ ಕಂಪನಿ, ಬೆಂಗಳೂರು ರವರಿಗೆ ಪವನ ವಿದ್ಯುತ್ ಯೋಜನೆ ಸ್ಥಾಪಿಸಲು 30 (ಮೂವತ್ತು) ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿ ಆದೇಶಿಸಿದೆ.

**ಷರತ್ತುಗಳು:–**

1. ಉದ್ದೇಶಿತ ಜಮೀನನ್ನು ಯಾವ ಉದ್ದೇಶಕ್ಕಾಗಿ ಗುತ್ತಿಗೆ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2. ಪ್ರಸ್ತಾಪಿತ ಜಮೀನು ಸಂಸ್ಥೆಗೆ ಅವಶ್ಯವಿಲ್ಲದಿದ್ದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
3. ಸದರಿ ಜಮೀನನ್ನು ಗುತ್ತಿಗೆ ನೀಡಿದ ದಿನಾಂಕದಿಂದ 2 ವರ್ಷದ ಒಳಗಾಗಿ ಉಪಯೋಗಿಸತಕ್ಕದ್ದು.
4. ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ನೋಡಿಕೊಳ್ಳತಕ್ಕದ್ದು.
5. ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿರುವ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಗುತ್ತಿಗೆ/ಉಪಗುತ್ತಿಗೆ ನೀಡಿರುವುದಾಗಲೀ, ಅಡಮಾನ ವರ್ಗಾವಣೆ ಇತರೆ ರೀತಿಯ ಪರಭಾರೆ ಮಾಡತಕ್ಕದ್ದಲ್ಲ.
6. ಸದರಿ ಜಮೀನುಗಳನ್ನು ಮೆ॥ ವಿಷ್ ವಿಂಡ್ ಕಂಪನಿ, ಬೆಂಗಳೂರು ಇವರಿಗೆ ಗುತ್ತಿಗೆ ಆಧಾರದ ಮೇಲೆ ಜಿಲ್ಲಾಡಳಿತವು ಹಸ್ತಾಂತರಿಸುವ ಆದೇಶದಲ್ಲಿ ಗ್ರಾಮದ ಹೆಸರು, ಸರ್ವೆ ನಂಬರ್ ಮತ್ತು ವಿಸ್ತೀರ್ಣದ ವಿವರಗಳನ್ನು ನಮೂದಿಸತಕ್ಕದ್ದು.
7. ಮೇಲ್ಕಂಡ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸದರಿ ಜಮೀನನ್ನು ಸರ್ಕಾರದ ವಶಕ್ಕೆ ನಿಯಮಾನುಸಾರ ತೆಗೆದುಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಾಂತೇಗೌಡ ಎಸ್.ಎಲ್**

**PR. 95** ಸರ್ಕಾರದ ಅಧೀನ ಕಾರ್ಯದರ್ಶಿ

**SC. 25** ಕಂದಾಯ ಇಲಾಖೆ (ಭೂ ಮಂಜೂರಾತಿ–3)

## ಕಂದಾಯ ಸಚಿವಾಲಯ

**ವಿಷಯ:** ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ವರದಾಪುರ, ವ್ಯಾಸಾಪುರ, ಹಂಪಾಪಟ್ಟಣ ಗ್ರಾಮಗಳಲ್ಲಿನ 18.60 ಎಕರೆ ಸರ್ಕಾರಿ ಜಮೀನನ್ನು ಕೆ.ಐ.ಎ.ಡಿ.ಬಿ ಮುಖಾಂತರ ಆರ್.ಬಿ.ಎಸ್.ಎಸ್.ಎನ್ ಇವರಿಗೆ ಕೈಗಾರಿಕೆ ಉದ್ದೇಶಕ್ಕಾಗಿ ಜಮೀನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳು, ಬಳ್ಳಾರಿ ಇವರ ಪತ್ರ ಸಂಖ್ಯೆ: ಕಂ:ಭೂಮಿ/340/2011–12, ದಿನಾಂಕ: 08.10.2015.

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಇವರು ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ, ಹಂಪಾಪಟ್ಟಣ ವರದಾಪುರ, ಮತ್ತು ವ್ಯಾಸಾಪುರ ಗ್ರಾಮಗಳ ವಿವಿಧ ಸರ್ವೆ ನಂಬರುಗಳಲ್ಲಿನ ಒಟ್ಟು 18.60 ಎಕರೆ ಸರ್ಕಾರಿ ಜಮೀನಿನ ಪೈಕಿ ವರದಾಪುರ ಗ್ರಾಮದ ಸ.ನಂ.396ರಲ್ಲಿ 1.04 ಎಕರೆ ಜಮೀನನ್ನು ಹೊರತುಪಡಿಸಿ ಉಳಿದ 17.56 ಎಕರೆ ಸರ್ಕಾರಿ ಜಮೀನನ್ನು ಕೆ.ಐ.ಎ.ಡಿ.ಬಿ ಮೂಲಕ ಮೆ: ಆರ್.ಬಿ.ಎಸ್.ಎಸ್.ಎನ್ ಫೆರಸ್ ಇಂಡಸ್ಟ್ರೀಸ್ ಪ್ರೈ. ಲಿಮಿಟೆಡ್ ರವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಮಂಜೂರು ಮಾಡಲು ಪ್ರಸ್ತಾಪಿಸಿರುತ್ತಾರೆ.

ಮೆ॥ ಆರ್.ಬಿ.ಎಸ್.ಎಸ್.ಎನ್ ಫೆರೋಸ್ ಇಂಡಸ್ಟ್ರೀಸ್ ಪ್ರೈ.ಲಿ ಇವರಿಗೆ 0.6 ಎಂಟಿಪಿಎ ಐರನ್ ಆಕ್ಸೈಡ್ ಪೆಲ್ಲೆಟ್ಸ್ ಮತ್ತು 18 ಮೆಘಾ ವ್ಯಾಟ್ ಸಾಮರ್ಥ್ಯದ ಥರ್ಮಲ್ ಪವರ್ ಪ್ಲಾಂಟ್ ಸ್ಥಾಪಿಸಲು ಸರ್ಕಾರದ ಆದೇಶ ಸಂಖ್ಯೆ: ಸಿಐ 71 ಎಸ್‌ಪಿಐ 2010, ದಿನಾಂಕ:25.02.2010ರಲ್ಲಿ ಅನುಮತಿಯನ್ನು ನೀಡಲಾಗಿದ್ದು, ಸದರಿ ಯೋಜನೆಯ ಜಾರಿಗಾಗಿ ದಿ.26.06.2014ರಂದು 2 ವರ್ಷಗಳ ಅವಧಿಗೆ ಕಾಲಾವಕಾಶವನ್ನು ವಿಸ್ತರಿಸಿ ಆದೇಶ ಹೊರಡಿಸಲಾಗಿರುತ್ತದೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ಕೆ.ಐ.ಎ.ಡಿ.ಬಿ, ದಾವಣಗೆರೆ ಇವರು ದಿ.05.02.2015ರ ಪತ್ರದಲ್ಲಿ ಮೆ॥ ಆರ್.ಬಿ.ಎಸ್.ಎಸ್.ಎನ್. ಫೆರಸ್ ಇಂಡಸ್ಟ್ರೀಸ್ ಪ್ರೈ. ಲಿಮಿಟೆಡ್ ಇವರಿಗೆ ಹಗರಿಬೊಮ್ಮನಹಳ್ಳಿ ತಾಲ್ಲೂಕು, ಹಂಪಾಪಟ್ಟಣ, ವ್ಯಾಸಪುರ ಮತ್ತು ವರದಾಪುರ ಗ್ರಾಮಗಳಲ್ಲಿ ಒಟ್ಟು 164–65 ಎಕರೆ ಜಮೀನನ್ನು ಕೆಐಎಡಿಬಿ ಕಾಯ್ದೆ 1966 ಕಲಂ 3(1), 1(3) ಹಾಗೂ 28(1)ರನ್ವಯ ಪ್ರಾಥಮಿಕ ಅಧಿಸೂಚನೆಯನ್ನು ಹೊರಡಿಸಲಾಗಿದ್ದು, ಈ ವಿಸ್ತೀರ್ಣದಲ್ಲಿ ಬರುವ ಒಟ್ಟು 18.60 ಎಕರೆ ಸರ್ಕಾರಿ ಜಮೀನುಗಳನ್ನು ಕೆ.ಐ.ಎಡಿ.ಬಿಗೆ ವರ್ಗಾಯಿಸಲು ಅವಶ್ಯ ಕ್ರಮಕೈಗೊಳ್ಳುವಂತೆ ಕೋರಿರುತ್ತಾರೆ.

ಮೆ॥ ಆರ್.ಬಿ.ಎಸ್.ಎಸ್.ಎನ್. ಫರೋಸ್ ಪ್ರೈ.ಲಿ. ಇವರ ಉದ್ದೇಶಿತ ಯೋಜನೆಗೆ ಸ್ವಾಧೀನಪಡಿಸಿಕೊಂಡ 164.65 ಎಕರೆ ಜಮೀನಿಗೆ ಕೆ.ಐ.ಎ.ಡಿ.ಬಿ ಕಾಯ್ದೆ 1966ರ ಕಲಂ 29(2)ರಡಿ ಭೂ ಬೆಲೆ ನಿರ್ಧರಣಾ ಸಮಿತಿಯು ಹಂಪಾಪಟ್ಟಣ ಗ್ರಾಮದಲ್ಲಿ ಸ್ವಾಧೀನ ಪಡಿಸಿಕೊಂಡ ಜಮೀನುಗಳಿಗೆ ಎಕರೆ ಒಂದಕ್ಕೆ ರೂ 3.80 ಲಕ್ಷ, ವ್ಯಾಸಾಪುರ ಗ್ರಾಮದಲ್ಲಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಎಕರೆ ಒಂದಕ್ಕೆ ರೂ. 4.00 ಲಕ್ಷ ಮತ್ತು ವರದಾಪುರ ಗ್ರಾಮದಲ್ಲಿ ಸ್ವಾಧೀನಪಡಿಸಿಕೊಂಡ ಜಮೀನುಗಳಿಗೆ ಎಕರೆ ಒಂದಕ್ಕೆ ರೂ 4.75 ಲಕ್ಷಗಳನ್ನು ಭೂದರ ನಿರ್ಧರಣೆ ಮಾಡಲು ನಿರ್ಣಯಿಸಲಾಗಿರುತ್ತದೆ.

ಆರ್.ಬಿ.ಎಸ್.ಎಸ್.ಎನ್ ಫೆರಸ್ ಇಂಡಸ್ಟ್ರೀಸ್ ಪ್ರೈ.ಲಿ. ಕಾರಿಗನೂರು ಇವರ ಪರವಾಗಿ ಕೆಐಎಡಿಬಿ ದಾವಣಗೆರೆ ಇವರು ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಹಂಪಾಪಟ್ಟಣ, ವರದಾಪುರ ಮತ್ತು ವ್ಯಾಸಾಪುರ ಗ್ರಾಮದಲ್ಲಿ ಭೂ ಸ್ವಾಧೀನಪಡಿಸಿಕೊಂಡಿರುವ ಜಮೀನುಗಳ ಹಾಗೂ ಈಗಾಗಲೇ ಸದರಿ ಕಂಪನಿಯವರು ಭೂ ಸುಧಾರಣಾ ಕಾಯ್ದೆ ಕಲಂ 109ರಡಿಯಲ್ಲಿ ಖರೀದಿಸಿದ ಖಾಸಗಿ ಜಮೀನುಗಳ ಮಧ್ಯದಲ್ಲಿ ಬರುವ ಸರ್ಕಾರಿ ಜಮೀನಿನ ವಿವರಗಳು ಈ ಕೆಳಗಿನಂತಿವೆ.

| ಕ್ರ.ಸಂ. | ಗ್ರಾಮ | ಸ.ನಂ. | ವಿಸ್ತೀರ್ಣ | ಅಕಾರ್ ಬಂದ್ ಹಾಗೂ ಪಹಣಿ ಪ್ರಕಾರ ವರ್ಗೀಕರಣ | ಹಾಲಿ ಭೂಮಿಯ ಸ್ಥಿತಿ. |
|---|---|---|---|---|---|
| **1** | **ಹಂಪಾಪಟ್ಟಣ** | 15ಬಿ | 0.94 | ಜಿ.ಯು.ರಾಳ್ಳ ಪ್ರದೇಶಂ(ಕಲ್ಲುಬಂಡೆ) | ಖಾಲಿ ಇದೆ |
| 2 | **ಹಂಪಾಪಟ್ಟಣ** | 16ಎ | 1.06 | ಜಿ.ಯು. ಬಂಡ(ಬಂಡ) | **ಖಾಲಿ ಇದೆ** |
| 3 | **ಹಂಪಾಪಟ್ಟಣ** | 16ಸಿ | 1.32 | ಜಿ.ಡಿ.(ಅನಾಧೀನ) | **ಖಾಲಿ ಇದೆ** |
| 4 | **ವ್ಯಾಸಾಪುರ** | 1ಡಿ | 2.28 | ಜಿ.ಡಿ.(ಅನಾಧೀನ) | **ಖಾಲಿ ಇದೆ** |
| 5 | **ವ್ಯಾಸಾಪುರ** | 4ಬಿ/2 | 5.46 | ಜಿ.ಡಿ.(ಅನಾಧೀನ) | **ಖಾಲಿ ಇದೆ** |
| 6 | **ವ್ಯಾಸಾಪುರ** | 8ಬಿ/2 | 3.63 | ಜಿ.ಡಿ.(ಅನಾಧೀನ) | **ಖಾಲಿ ಇದೆ** |
| 7 | **ವರದಾಪುರ** | 396 | 1.04 | ಎ.ಡಬ್ಲ್ಯೂ | **ಖಾಲಿ ಇದೆ** |
| 8 | **ವರದಾಪುರ** | 398ಬಿ | 1.57 | ಎ.ಡಬ್ಲ್ಯೂ | **ಖಾಲಿ ಇದೆ** |
| 9 | **ವರದಾಪುರ** | 398ಡಿ | 0.47 | ಎ.ಡಬ್ಲ್ಯೂ | **ಖಾಲಿ ಇದೆ** |
| 10 | **ವರದಾಪುರ** | 399ಎ | 0.83 | ಎ.ಡಬ್ಲ್ಯೂ | **ಖಾಲಿ ಇದೆ** |
| | **ಒಟ್ಟು** | | **18.60** | | |

ತಹಶೀಲ್ದಾರ್, ಹಗರಿಬೊಮ್ಮನಹಳ್ಳಿ ಇವರು ದಿ.11.08.2015ರಂದು ನಡೆಸಿದ ಸ್ಥಳ ತನಿಖಾ ವರದಿಯನ್ವಯ ಪ್ರಸ್ತಾಪಿತ ಜಮೀನುಗಳ ಮಧ್ಯದಲ್ಲಿ ಯಾವುದೇ ರಸ್ತೆ, ಹಳ್ಳ ಹರಿಯುತ್ತಿಲ್ಲವೆಂದು, ಆದರೆ ತಂಬ್ರಹಳ್ಳಿ ಹೋಬಳಿ ವ್ಯಾಪ್ತಿಯ ವರದಾಪುರ ಗ್ರಾಮದ ಸ.ನಂ. 396ರಲ್ಲಿನ ವಿಸ್ತೀರ್ಣ 1.04 ಎಕರೆ ಜಮೀನಿನಲ್ಲಿ ರೈಲ್ವೇ ಹಳಿ ಹಾದುಹೋಗಿರುತ್ತದೆಂದು ವರದಿ ಮಾಡುತ್ತಾ, ಸದರಿ ಜಮೀನನ್ನು ಹೊರತುಪಡಿಸಿ 17.56 ಎಕರೆ ವಿಸ್ತೀರ್ಣದ ಸರ್ಕಾರಿ ಜಮೀನನ್ನು ಆರ್.ಬಿ.ಎಸ್.ಎಸ್.ಎನ್ ರವರಿಗೆ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 49 ಎಲ್‌ಜಿಇ 2015, ಬೆಂಗಳೂರು ದಿನಾಂಕ: 22.01.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಹಂಪಾಪಟ್ಟಣ, ವ್ಯಾಸಾಪುರ ಮತ್ತು ವರದಾಪುರ ಗ್ರಾಮದ ವಿವಿಧ ಸರ್ವೆ ನಂಬರ್‌ಗಳಲ್ಲಿನ ವಿಸ್ತೀರ್ಣ 18.60 ಎಕರೆ ಜಮೀನಿನ ಪೈಕಿ ವರದಾಪುರ ಗ್ರಾಮದ ಸ.ನಂ. 396ರಲ್ಲಿ 1.04 ಎಕರೆ ಜಮೀನನ್ನು ಹೊರತುಪಡಿಸಿ ಉಳಿದ ವಿಸ್ತೀರ್ಣ 17.56 ಎಕರೆ ಸರ್ಕಾರಿ ಜಮೀನುಗಳಿಗೆ ಭೂ ಬೆಲೆ ನಿರ್ಧರಣಾ ಸಮಿತಿಯು ಶಿಫಾರಸ್ಸು ಮಾಡಿರುವ ಭೂದರ ಹಾಗೂ ಇತರೆ ಶುಲ್ಕಗಳನ್ನು ವಿಧಿಸಿ, ಹಾಗೂ ಹಂಪಾಪಟ್ಟಣ ಗ್ರಾಮದ ಸ.ನಂ. 15ಬಿರ ವಿಸ್ತೀರ್ಣ 0.94 ಎಕರೆ ಮತ್ತು ಸ.ನಂ.16ಎರ ವಿಸ್ತೀರ್ಣ 1.06 ಎಕರೆ ಜಮೀನು ಡಯಾಗ್ಲಾಟ್ ಪ್ರಕಾರ "ಕಲ್ಲುಬಂಡೆ ಮತ್ತು ಬಂಡೆ ಎಂದು ನಮೂದಾಗಿರುವುದರಿಂದ ಇವುಗಳನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ ಕಲಂ 68(1)ರಂತೆ ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸುವುದಕ್ಕೆ ವಿನಾಯತಿ ನೀಡಿ ಹಾಗೂ ಗೋಮಾಳ ಜಮೀನುಗಳಿದ್ದಲ್ಲಿ ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರ ಅನ್ವಯ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ಇವರ ಮುಖಾಂತರ ಆರ್.ಬಿ.ಎಸ್.ಎಸ್.ಎನ್ ಫೆರೋಸ್ ಇಂಡಸ್ಟ್ರೀಸ್ ಪ್ರೈ.ಲಿ. ಕಾರಿಗನೂರು ಇವರಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 22ರನ್ವಯ ಮಂಜೂರು ಮಾಡಿ ಆದೇಶಿಸಲಾಗಿದೆ.

**ಷರತ್ತುಗಳು:–**

1) ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಕೆರೆ ಹಾಗೂ ನಾಲಗಳು ಹರಿಯುತ್ತಿದ್ದಲ್ಲಿ ಅವುಗಳ ಸ್ವಾಭಾವಿಕ ಹರಿವಿಗೆ ಅಡ್ಡಿಪಡಿಸತಕ್ಕದ್ದಲ್ಲ.

2) ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.

3) ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.

4) ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.

5) ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.

6) ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ / ಉಪಗುತ್ತಿಗೆ ನೀಡುವುದಾಗಲಿ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.

7) ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.

8) ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

9) ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

10) ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಾಂತೇಗೌಡ ಎಸ್.ಎಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ–3)

**PR. 117**

**SC. 25**

## ಕಂದಾಯ ಸಚಿವಾಲಯ

**ವಿಷಯ:** ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಕಸಬಾ ಹೋಬಳಿ, ಕಲ್ಲುಕೋಟೆ ಗ್ರಾಮದ ಸ.ನಂ.71 ಮತ್ತು ಸ.ನಂ.72ರಲ್ಲಿ ವಿವಿಧ ಖಾಸಗಿ ಸಂಘ–ಸಂಸ್ಥೆಗಳಿಗೆ ಶೈಕ್ಷಣಿಕ ಉದ್ದೇಶಗಳಿಗಾಗಿ, ಸರ್ಕಾರಿ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್ಎನ್‌ಡಿ/ ಸಿಆರ್/26, 27, 28, 29, 30, 31, 32, 33, 38, 39, 40, 41, 42, 43/14–15 ದಿನಾಂಕ:13–08–2014.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು ಬೆಂಗಳೂರು ಇವರು ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಕಸಬಾ ಹೋಬಳಿ, ಕಲ್ಲುಕೋಟೆ ಗ್ರಾಮದ ಸ.ನಂ.71 ಮತ್ತು ಸ.ನಂ.72ರಲ್ಲಿನ ಸರ್ಕಾರಿ /ಗೋಮಾಳ/ ಸೇಂದಿವನ ಜಮೀನುಗಳನ್ನು ಶೈಕ್ಷಣಿಕ ಉದ್ದೇಶಗಳಿಗಾಗಿ ಶಿರಾ ತಾಲ್ಲೂಕಿನ ವಿವಿಧ ಖಾಸಗಿ ಸಂಘ ಸಂಸ್ಥೆಗಳಿಗೆ ಮಂಜೂರು/ಗುತ್ತಿಗೆ ಆಧಾರದ ಮೇಲೆ ನೀಡುವ ಬಗ್ಗೆ ಪ್ರಸ್ತಾಪಿಸಿದ್ದಾರೆ.

ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು ಕಲ್ಲುಕೋಟೆ ಗ್ರಾಮದ ಸ.ನಂ.71ರ ವಿಸ್ತೀರ್ಣ 10–32 ಎಕರೆ ಇದ್ದು ಹಾಗೂ ಸ.ನಂ.72ರ ಒಟ್ಟು ವಿಸ್ತೀರ್ಣ 16–18 ಎಕರೆ ಇದ್ದು ಈ ಪೈಕಿ 2–00 ಎಕರೆ ವಿಲೇಯಾಗಿದ್ದು, ಉಳಿಕೆ 14–18 ಎಕರೆ ಜಮೀನಿನ ಪೈಕಿ, ಸ.ನಂ.71 ಮತ್ತು 72ರ ಮೂಲ ದಾಖಲೆಗಳಾದ ಐಎಲ್ ಮತ್ತು ಖೇತುವಾರು ಪ್ರಕಾರ ಗೋಮಾಳ ಎಂದು ಇದ್ದು, ಪಹಣಿ ಕಾಲಂ.9ರಲ್ಲಿ ಸೇಂದಿವನ ಎಂದು ದಾಖಲಾಗಿರುವುದಾಗಿ, ಸದರಿ ಜಮೀನು ಶಿರಾ ನಗರಸಭೆ ವ್ಯಾಪ್ತಿಯಲ್ಲಿದ್ದು, ನಗರ ಯೋಜನೆ ಸಿ.ಡಿ.ಪಿ.ಯಂತೆ ವಸತಿ ವಲಯದಲ್ಲಿರುವುದಾಗಿ ಮಂಜೂರಾತಿ ಕೋರಿರುವ ಖಾಸಗಿ ಸಂಘ ಸಂಸ್ಥೆಗಳು ಸಾರ್ವಜನಿಕ ಸೇವಾ ಸಂಸ್ಥೆಗಳಾಗಿದ್ದು, ಬಡಜನ, ದೀನದಲಿತರ ಹಾಗೂ ಹಿಂದುಳಿದವರ ಸೇವೆಯಲ್ಲಿ ತೊಡಗಿರುವುದರಿಂದ ಶೈಕ್ಷಣಿಕ ಉದ್ದೇಶ ಹಾಗೂ ವಿದ್ಯಾರ್ಥಿ ನಿಲಯ ಸ್ಥಾಪಿಸಲು ಸದರಿ ಜಮೀನುಗಳನ್ನು ಕರ್ನಾಟಕ ಭೂ ಕಂದಾಯ ಮಂಜೂರಾತಿ ನಿಯಮಾವಳಿ, 1969 ರಡಿ ಮಂಜೂರು ಮಾಡುವ ಅಥವಾ ನಿಗಧಿತ ಕಾಲಾವಧಿಗೆ ಗುತ್ತಿಗೆ ನೀಡುವ ಬಗ್ಗೆ ಪ್ರಸ್ತಾಪಿಸಿರುತ್ತಾರೆ.

ಸದರಿ ಖಾಸಗಿ ಸಂಘ/ಸಂಸ್ಥೆಗಳು ಕೋರಿರುವ ಜಮೀನು ನಗರಸಭೆಗೆ 5 ಕಿ.ಮೀ ವ್ಯಾಪ್ತಿಯಲ್ಲಿದ್ದು, ಪಹಣಿ ಪತ್ರಿಕೆಯಲ್ಲಿ ಸೇಂದಿವನವೆಂದು ನಮೂದಾಗಿರುವುದರಿಂದ ಸ್ಥಳ ಪರಿಶೀಲನೆ ಮಾಡಲಾಗಿದ್ದು, ಸದರಿ ಸ್ಥಳ ಪರಿಶೀಲನೆಯಂತೆ ಈಚಲು ಗಿಡಗಳು ಕಂಡು ಬರುವುದಿಲ್ಲ ಹಾಗೂ ಅಬಕಾರಿ ಇಲಾಖೆಯ ಸ್ವಾಧೀನದಲ್ಲಿರುವುದಿಲ್ಲವೆಂದು ವರದಿಯಲ್ಲಿ ತಿಳಿಸಾಲಾಗಿದೆ. ಅದರಂತೆ ಹೊಸ ಭೂ ನೀತಿ ಆಧರಿಸಿ, ಇತ್ತೀಚೆಗೆ ಹೊರಡಿಸಲಾದ ಅಧಿಸೂಚನೆ ಸಂಖ್ಯೆ: ಆರ್‌ಡಿ 9 ಎಲ್‌ಜಿಪಿ 2015, ದಿನಾಂಕ:09.06.2015ರಲ್ಲಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ಕ್ಕೆ ನಿಯಮ 22ಎ ಅನ್ನು ಹೊಸದಾಗಿ

ಸೇರ್ಪಡೆ ಮಾಡಲಾಗಿದ್ದು, ಸದರಿ ನಿಯಮದ 22ರನ್ವಯ ಸರ್ಕಾರಿ ಜಮೀನನ್ನು ಮಂಜೂರು ಅಥವಾ ಗುತ್ತಿಗೆ ಆಧಾರದ ಮೇಲೆ ನೀಡುವಾಗ ಪಾಲಿಸಬೇಕಾದ ವಿಧಿ ವಿಧಾನಗಳನ್ನು ತಿಳಿಸಲಾಗಿದೆ. ಅದರಂತೆ ನಿಯಮ 22ಎ(2)ರಲ್ಲಿ ಯಾವುದೇ ವ್ಯಕ್ತಿ ಮತ್ತು ಖಾಸಗಿ ಸಂಸ್ಥೆಗಳಿಗೆ ನಗರ ಮತ್ತು ಮುನ್ಸಿಪಲ್ ಪರಿಮಿತಿಯೊಳಗಿನ ಸರ್ಕಾರಿ ಜಮೀನನ್ನು ಮಂಜೂರು ಮಾಡತಕ್ಕದ್ದಲ್ಲವೆಂದು ಸ್ಪಷ್ಟಪಡಿಸಲಾಗಿದೆ. ಸದರಿ ಭೂಮಿಯನ್ನು ಸಾರ್ವಜನಿಕ ಉದ್ದೇಶಗಳಿಗಾಗಿ ಮೀಸಲಿಡಬೇಕಾಗಿರುತ್ತದೆ.

ಆದರೆ ಪ್ರಸ್ತಾವನೆಯಲ್ಲಿ ಕೋರಿರುವ ಸಂಘ/ಸಂಸ್ಥೆಗಳು ಸಮಾಜ ಸೇವೆಯಲ್ಲಿ ತೊಡಗಿಸಿಕೊಂಡಿದ್ದು, ಶೈಕ್ಷಣಿಕ ಉದ್ದೇಶಗಳಗಾಗಿ ನಿಯಮ 22ಎ(1)(i)ರನ್ವಯ ಶೈಕ್ಷಣಿಕ ಉದ್ದೇಶಕ್ಕಾಗಿ ಇತರೆ ವರ್ಗದವರಿಗೆ ಮಾರುಕಟ್ಟೆ ದರವನ್ನು ವಿಧಿಸಿ ಮಂಜೂರು ಮಾಡಬಹುದಾಗಿದೆ. ಕಲ್ಲುಕೋಟೆ ಗ್ರಾಮದ ಸ.ನಂ.71 ಮತ್ತು 72ರಲ್ಲಿ ಖುಷ್ಕಿ ಜಮೀನಿನ ಮಾರ್ಗಸೂಚಿ ಬೆಲೆ ಎಕರೆ ಒಂದಕ್ಕೆ ರೂ.8,78,000/– ಇರುವುದಾಗಿ ಉಪನೋಂದಣಾಧಿಕಾರಿಗಳು ಶಿರಾ ತಾಲ್ಲೂಕು ಇವರು ತಿಳಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 79 ಎಲ್‌ಜಿಟಿ 2014, ಬೆಂಗಳೂರು, ದಿನಾಂಕ:31–12–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ತುಮಕೂರು ಜಿಲ್ಲೆ, ಶಿರಾ ತಾಲ್ಲೂಕು, ಕಸಬಾ ಹೋಬಳಿ, ಕಲ್ಲುಕೋಟೆ ಗ್ರಾಮದ ಸ.ನಂ.71 ಮತ್ತು ಸ.ನಂ.72ರ ಒಟ್ಟು ಕ್ಷೇತ್ರ 12–21 ಎಕರೆ ಸರ್ಕಾರಿ/ಗೋಮಾಳ/ಸೇಂದಿವನ ಜಮೀನುಗಳ ಪೈಕಿ ಗೋಮಾಳ ಜಮೀನಿಗೆ ಸಂಬಂಧಿಸಿದಂತೆ, ಕರ್ನಾಟಕ ಭೂ ಕಂದಾಯ ನಿಯಮಗಳ, 1966 ನಿಯಮ 97(4)ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969 ನಿಯಮ 19 ರನ್ವಯ ಪ್ರಚಲಿತ ಮಾರ್ಗಸೂಚಿ ಬೆಲೆಯ ಶೇ.10 ರಷ್ಟನ್ನು ವಾರ್ಷಿಕ ಗುತ್ತಿಗೆ ದರವನ್ನಾಗಿ ವಿಧಿಸಿ, ಹಾಗೂ 2 ವರ್ಷಗಳಿಗೊಮ್ಮೆ ಗುತ್ತಿಗೆ ದರದ ಶೇ.5 ರಷ್ಟನ್ನು ಹೆಚ್ಚಿಸುವ ಷರತ್ತಿಗೊಳಪಟ್ಟು ಈ ಕೆಳಕಂಡ ಸಂಘ ಸಂಸ್ಥೆಗಳಿಗೆ ಅವುಗಳ ಹೆಸರಿನ ಎದುರು ತೋರಿಸಿರುವ ವಿಸ್ತೀರ್ಣದ ಜಮೀನನ್ನು 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಹಾಗೂ ಈ ಕೆಳಕಂಡ ಷರತ್ತುಗಳನ್ನು ವಿಧಿಸಿ, ಮಂಜೂರು ಮಾಡಿ ಆದೇಶಿಸಿದೆ.

| ಕ್ರ. ಸಂ | ಖಾಸಗಿ ಸಂಘ–ಸಂಸ್ಥೆ ಹೆಸರು | ಸ.ನಂ | ವಿಸ್ತೀರ್ಣ ಎ/ಗು | ಉದ್ದೇಶ |
|---|---|---|---|---|
| 1 | ಆರ್ಯ–ಈಡಿಗರ ಸಂಘ, ಶಿರಾ | 72 | 0–20 | ಶೈಕ್ಷಣಿಕ |
| 2 | ಸೇವಾಲಾಲ್ ಬಂಜಾರ (ಲಂಬಾಣಿ) ಕ್ಷೇಮಾಭಿವೃದ್ಧಿ ಸಂಘ, ಶಿರಾ | 71 | 0–20 | ಶೈಕ್ಷಣಿಕ |
| 3 | ನಂದಿನಿ ಪತ್ತಿನ ಸಹಕಾರ ಸಂಘ ನಿಯಮಿತ, ಶಿರಾ | 72 | 0–20 | ಶೈಕ್ಷಣಿಕ |
| 4 | ಚೌಡೇಶ್ವರಿ ಮೇದ ಎಸ್‌ಟಿ ಬಿದಿರು ಕೆಲಸಗಾರರ ಕ್ಷೇಮಾಭಿವೃದ್ಧಿ ಸಂಘ, ಶಿರಾ | 72 | 0–20 | ಶೈಕ್ಷಣಿಕ |
| 5 | ಸವಿತಾ ಸಮಾಜ, ಶಿರಾ | 72 | 0–20 | ಶೈಕ್ಷಣಿಕ |
| 6 | ಕುಂಬಾರರ ಸಂಘ, ಶಿರಾ | 71 | 0–20 | ಶೈಕ್ಷಣಿಕ |
| 7 | ಛಲವಾದಿ(ಆರ್ಯ ದ್ರಾವಿಡ) ಮಹಾಸಭಾ, ಶಿರಾ | 72 | 0–20 | ಶೈಕ್ಷಣಿಕ |
| 8 | ಬಲಿಜ ಮಹಿಳಾ ಸಂಘ, ಶಿರಾ | 72 | 0–20 | ಶೈಕ್ಷಣಿಕ |
| 9 | ಕನಕ ಸಾಂಸ್ಕೃತಿಕ ವೇದಿಕೆ ಸಂಘ, ಶಿರಾ | 71 | 0–20 | ಶೈಕ್ಷಣಿಕ |
| 10 | ಕುಂಚಿಟಿಗರ ಸಂಘ, ಶಿರಾ | 71 | 1–00 | ವಿದ್ಯಾರ್ಥಿ ನಿಲಯ |
| 11 | ಹಳ್ಳಿಕಾರರ ಸಂಘ, ಶಿರಾ | 71 | 1–00 | ವಿದ್ಯಾರ್ಥಿ ನಿಲಯ |
| 12 | ರಾಮಕೃಷ್ಣ ವಿವೇಕಾನಂದ ಆಶ್ರಮ, ತುಮಕೂರು | 71 | 4–01 | ಶೈಕ್ಷಣಿಕ |
| 13 | ಅಗ್ನಿ ವಂಶ ಕ್ಷತ್ರಿಯ ತಿಗಳರ ಕ್ಷೇಮಾಭಿವೃದ್ಧಿ ಸಂಘ, ಶಿರಾ | 71 | 0–20 | ವಿದ್ಯಾರ್ಥಿ ನಿಲಯ |
| 14 | ವಾಲ್ಮೀಕಿ ನಾಯಕ ಸೇವಾ ಸಂಘ, ಶಿರಾ | 72 | 0–20 | ಶೈಕ್ಷಣಿಕ |
| 15 | ಲಕ್ಷ್ಮೀ ರಂಗನಾಥ ಆದಿ ಜಾಂಬವಂತ ವಿವಿಧೋದ್ದೇಶ ಸಹಕಾರ ಸಂಘ, ಶಿರಾ | 72 | 1–00 | ಶೈಕ್ಷಣಿಕ |
| | **ಒಟ್ಟು** | **12** | **21** | |

**ಷರತ್ತುಗಳು:–**

1. ಉದ್ದೇಶಿತ ಜಮೀನನ್ನು ಯಾವ ಉದ್ದೇಶಕ್ಕಾಗಿ ಗುತ್ತಿಗೆ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2. ಪ್ರಸ್ತಾಪಿತ ಜಮೀನು ಸಂಸ್ಥೆಗೆ ಅವಶ್ಯವಿಲ್ಲದಿದ್ದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
3. ಸದರಿ ಜಮೀನನ್ನು ಗುತ್ತಿಗೆ ನೀಡಿದ ದಿನಾಂಕದಿಂದ 2 ವರ್ಷದ ಒಳಗಾಗಿ ಉಪಯೋಗಿಸತಕ್ಕದ್ದು.
4. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದಲ್ಲ.

5. ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ನೋಡಿಕೊಳ್ಳತಕ್ಕದ್ದು.
6. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
7. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
8. ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿರುವ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಗುತ್ತಿಗೆ/ ಉಪಗುತ್ತಿಗೆ ನೀಡುವುದಾಗಲೀ, ಅಡಮಾನ ವರ್ಗಾವಣೆ ಇತರೆ ರೀತಿಯ ಪರಭಾರೆ ಮಾಡತಕ್ಕದ್ದಲ್ಲ.
9. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಸದರಿ ಜಮೀನನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳಲು ನಿಯಮಾನುಸಾರ ಕ್ರಮ ಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಾಂತೇಗೌಡ ಎಸ್.ಎಲ್**

PR. 96 ಸರ್ಕಾರದ ಅಧೀನ ಕಾರ್ಯದರ್ಶಿ

SC. 25 ಕಂದಾಯ ಇಲಾಖೆ. (ಭೂ ಮಂಜೂರಾತಿ–3)

## ಕಂದಾಯ ಸಚಿವಾಲಯ

**ವಿಷಯ:** ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಭೂ ಸ್ವಾಧೀನಕ್ಕೆ ಒಳಪಟ್ಟಿರುವ ಸರ್ಕಾರಿ ಜಮೀನುಗಳನ್ನು ಸದರಿ ಮಂಡಳಿಗೆ ಮಂಜೂರು ಮಾಡಿ ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಪರ ಮುಖ್ಯ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅ.ಸ. ಪತ್ರ ಸಂಖ್ಯೆ: ಸಿಐ 128 ಎಸ್‌ಪಿಕ್ಯೂ 2013, ದಿನಾಂಕ: 18–06–2015 ಮತ್ತು 06–08–2015.

2. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಇವರ ಅ.ಸ.ಪತ್ರ ಸಂಖ್ಯೆ:ಸಿಐ 128 ಎಸ್‌ಪಿಕ್ಯೂ 2013, ದಿನಾಂಕ:26–11–2015.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು [ಕೆ.ಐ.ಎ.ಡಿ.ಬಿ] ಕೈಗಾರಿಕಾ ಅಭಿವೃದ್ಧಿಗಾಗಿ ರಾಜ್ಯಾದ್ಯಂತ ಸ್ವಾಧೀನಪಡಿಸಿಕೊಂಡಿರುವ ಜಮೀನುಗಳ ಮಧ್ಯಭಾಗದಲ್ಲಿ ಹಾಗೂ ಆಯಕಟ್ಟಿಗೆ ಹೊಂದಿಕೊಂಡಂತೆ ಸರ್ಕಾರಕ್ಕೆ ಸೇರಿದ ಕೆಲವು ಕಂದಾಯ ಜಮೀನುಗಳು ಸಹ ಸೇರ್ಪಟ್ಟಿದ್ದು, ಸದರಿ ಜಮೀನುಗಳನ್ನು ಕೆ.ಐ.ಎ.ಡಿ.ಬಿ.ಗೆ ಮಂಜೂರು ಮಾಡಿ ಹಸ್ತಾಂತರಿಸುವಂತೆ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ಕೋರಿರುತ್ತದೆ. ರಾಜ್ಯದ 18 ಜಿಲ್ಲೆಗಳಲ್ಲಿ ಒಟ್ಟು 12,985 ಎಕರೆ ಇಂತಹ ಜಮೀನನ್ನು ಹಸ್ತಾಂತರಿಸಲು ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯು ಕೋರಿದ್ದು, ಈವರೆಗೆ 2150–19 ಎಕರೆ ಜಮೀನನ್ನು ಸದರಿ ಮಂಡಳಿಗೆ ಹಸ್ತಾಂತರಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ: (2) ರ ದಿನಾಂಕ: 26–11–2015 ರ ಸರ್ಕಾರದ ಅಪರ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ ಇವರ ಪತ್ರದಲ್ಲಿ ದಿನಾಂಕ:24–11–2015 ರಂದು Invest Karnataka –2016 ರ ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ High Power Committee ಸಭೆಯಲ್ಲಿ ಮಾನ್ಯ ಮುಖ್ಯಮಂತ್ರಿಯವರು ಕೈಗಾರಿಕಾ ಪ್ರದೇಶದ ಮಧ್ಯದಲ್ಲಿರುವ ಸರ್ಕಾರಿ ಜಮೀನುಗಳನ್ನು ದಿನಾಂಕ: 15.12.2015 ರೊಳಗೆ ಕೆ.ಐ.ಎ.ಡಿ.ಬಿ ಗೆ ಹಸ್ತಾಂತರಿಸಲು ಸೂಚಿಸಿರುತ್ತಾರೆ. ಪ್ರಸ್ತುತ ಈ ಕೆಳಕಂಡ 15 ಜಿಲ್ಲೆಗಳಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಕೈಗಾರಿಕಾ ಪ್ರದೇಶಕ್ಕಾಗಿ ಸ್ವಾಧೀನಪಡಿಸಿದ ಜಮೀನಿನ ಪೈಕಿ ಕಂದಾಯ ಇಲಾಖೆಯಿಂದ ಮಂಜೂರಾಗಲು ಬಾಕಿ ಇರುವ ಸರ್ಕಾರಿ ಜಮೀನುಗಳ ವಿವರ ಈ ಕೆಳಗಿನಂತಿದೆ.

| ಕ್ರ.ಸಂ | ಜಿಲ್ಲೆ | ಕೈಗಾರಿಕೆ ಪ್ರದೇಶ |
|---|---|---|
| 1 | ಮೈಸೂರು | 582–21 |
| 2 | ಮಂಡ್ಯ | 160–01 |
| 3 | ವಿಜಯಪುರ | 425–26 |
| 4 | ಬೆಳಗಾವಿ | 3880–26 |
| 5 | ಕೋಲಾರ | 84–01 |
| 6 | ಚಿಕ್ಕಬಳ್ಳಾಪುರ | 32–23 |
| 7 | ತುಮಕೂರು | 3032–04 |
| 8 | ಹಾಸನ | 66–30 |
| 9 | ಬಳ್ಳಾರಿ | 37–14 |
| 10 | ಶಿವಮೊಗ್ಗ | 594–26 |
| 11 | ದಕ್ಷಿಣ ಕನ್ನಡ | 228–19 |
| 12 | ಚಿತ್ರದುರ್ಗ | 1140–08 |

| | | |
|---|---|---|
| 13 | ಚಾಮರಾಜನಗರ | 238–08 |
| 14 | ಹಾವೇರಿ | 162–38 |
| 15 | ರಾಮನಗರ | 147–17 |
| | **ಒಟ್ಟು** | **10814–15** |

ಮೇಲೆ ಪ್ರಸ್ತಾಪಿಸಿರುವ ಸರ್ವೇ ನಂಬರ್‌ಗಳಲ್ಲಿ ಸರ್ಕಾರಿ ಗೋಮಾಳ, ಪೊರಂಬೋಕು, ಹಳ್ಳ, ಸರ್ಕಾರಿ ಕೆರೆ, ಸರವು, ಬಂಡಿದಾರಿ ಇತ್ಯಾದಿ ವರ್ಗೀಕೃತ ಜಮೀನುಗಳು ಸಹ ಸೇರಿರುತ್ತವೆ. ಸರ್ಕಾರಿ ಗೋಮಾಳ, ಪೊರಂಬೋಕು ಮತ್ತು ಸರ್ಕಾರಿ ಖರಾಬುಗಳಿಗೆ ಸಂಬಂಧಿಸಿದಂತೆ ಈ ಜಮೀನನ್ನು ಕೈಗಾರಿಕಾ ಉದ್ದೇಶಕ್ಕಾಗಿ ಕೆ.ಐ.ಎ.ಡಿ.ಬಿ.ಗೆ ಹಸ್ತಾಂತರಿಸುವ ಕಾರಣ ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 68(1) ಮತ್ತು 68(5)ರಿಂದ ವಿಹಿತಗೊಳಿಸುವುದಕ್ಕೆ ವಿನಾಯಿತಿ ನೀಡಬೇಕಾಗುತ್ತದೆ ಹಾಗೂ ಗೋಮಾಳ ಜಮೀನಿಗೆ ಸಂಬಂಧಿಸಿದಂತೆ ಕರ್ನಾಟಕ ಭೂ ಕಂದಾಯ ನಿಯಮಗಳು, 1966ರ ನಿಯಮ 97(4)ರ ಅನ್ವಯ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಕೆ.ಐ.ಎ.ಡಿ.ಬಿ ಗೆ ಹಸ್ತಾಂತರಿಸಬೇಕಿರುತ್ತದೆ. ಅದರಂತೆ 15 ಜಿಲ್ಲೆಗಳ 10814–15 ಎಕರೆ/ಗುಂಟೆ ಜಮೀನನ್ನು ಕೆ.ಐ.ಎ.ಡಿ.ಬಿ ಗೆ ಹಸ್ತಾಂತರಿಸಲು ಪರಿಶೀಲಿಸಿದ್ದು, ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 437 ಎಲ್‌ಜಿಬಿ 2015, ಬೆಂಗಳೂರು ದಿನಾಂಕ: 31–12–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಭೂ ಸ್ವಾಧೀನಕ್ಕೆ ಒಳಪಟ್ಟಿರುವ ಸರ್ಕಾರಿ ಜಮೀನುಗಳನ್ನು **ಈ ಕೆಳಗೆ ಸೂಚಿಸಿರುವ 15 ಜಿಲ್ಲೆಗಳಲ್ಲಿನ** ಒಟ್ಟು **10814.15** ಎಕರೆ/ಗುಂಟೆ ವಿಸ್ತೀರ್ಣದ ಜಮೀನುಗಳಿಗೆ ಸಂಬಂಧಿಸಿದಂತೆ ಪೊರಂಬೋಕು ಮತ್ತು ಸರ್ಕಾರಿ ಖರಾಬುಗಳಿಗೆ ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 68(1) ಮತ್ತು 68(5)ರಡಿ ವಿಹಿತಗೊಳಿಸುವುದಕ್ಕೆ ವಿನಾಯಿತಿ ನೀಡಿ ಹಾಗೂ ಗೋಮಾಳ ಜಮೀನುಗಳಿಗೆ ಕರ್ನಾಟಕ ಭೂ ಕಂದಾಯ ನಿಯಮಗಳು, 1966ರ ನಿಯಮ 97(4)ರ ಅನ್ವಯ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ಉಚಿತವಾಗಿ ಮತ್ತು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಿ ಹಸ್ತಾಂತರಿಸಿದೆ.

| ಕ್ರ.ಸಂ | ಜಿಲ್ಲೆ | ಕೈಗಾರಿಕೆ ಪ್ರದೇಶ |
|---|---|---|
| 1 | ಮೈಸೂರು | 582–21 |
| 2 | ಮಂಡ್ಯ | 160–01 |
| 3 | ವಿಜಯಪುರ | 425–26 |
| 4 | ಬೆಳಗಾವಿ | 3880–26 |
| 5 | ಕೋಲಾರ | 84–01 |
| 6 | ಚಿಕ್ಕಬಳ್ಳಾಪುರ | 32–23 |
| 7 | ತುಮಕೂರು | 3032–04 |
| 8 | ಹಾಸನ | 66–30 |
| 9 | ಬಳ್ಳಾರಿ | 37–14 |
| 10 | ಶಿವಮೊಗ್ಗ | 594–26 |
| 11 | ದಕ್ಷಿಣ ಕನ್ನಡ | 228–19 |
| 12 | ಚಿತ್ರದುರ್ಗ | 1140–08 |
| 13 | ಚಾಮರಾಜನಗರ | 238–08 |
| 14 | ಹಾವೇರಿ | 162–38 |
| 15 | ರಾಮನಗರ | 147–17 |
| | **ಒಟ್ಟು** | **10814–15** |

ಮೇಲೆ ತಿಳಿಸಿರುವ ಜಮೀನಿನ ಗ್ರಾಮವಾರು ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

**ಷರತ್ತುಗಳು:**

(1) ಮಂಜೂರು ಮಾಡಲಾಗಿರುವ ಮೇಲೆ ತಿಳಿಸಿರುವ 10814–15 ಎಕರೆ/ಗುಂಟೆ ಜಮೀನನ್ನು ಕೆ.ಐ.ಎ.ಡಿ.ಬಿ ಗೆ ವಾಸ್ತವವಾಗಿ ಹಸ್ತಾಂತರಿಸುವ ಸಮಯದಲ್ಲಿ ಆಯಾ ಜಿಲ್ಲೆಯ ಆಯಾ ತಾಲ್ಲೂಕಿನ ಗ್ರಾಮದ ಹೆಸರಿನ ಎದುರು ನಮೂದಿಸಿರುವ ಹೆಸರಿನ ಎದುರು ನಮೂದಿಸಿರುವ ಎಕರೆ/ಗುಂಟೆ ಜಮೀನಿನ ಸರ್ವೆ ನಂಬರ್ ಹಾಗೂ ವಿಸ್ತೀರ್ಣದ ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿರುವಂತೆ ನಮೂದಿಸಿ ಹಸ್ತಾಂತರಿಸಲು ಕ್ರಮವಹಿಸುವುದು.

(2) ಹಸ್ತಾಂತರಿಸಲಾಗುತ್ತಿರುವ ಜಮೀನುಗಳ ಪೈಕಿ ಕೆರೆ, ಕೆರೆ ಅಂಗಳ, ಹಳ್ಳ, ಸರವು, ರುದ್ರಭೂಮಿ ಹಾಗೂ ಬಂಡಿದಾರಿ ಇವುಗಳನ್ನು ಯಥಾಸ್ಥಿತಿ ಸಂರಕ್ಷಿಸಿಕೊಂಡು ಹೋಗಬೇಕೆಂದು ಹಾಗೂ ಅವುಗಳ ಗುಣಲಕ್ಷಣಗಳಲ್ಲಿ ಯಾವುದೇ ಬದಲಾವಣೆಯಾಗದಂತೆ ಕ್ರಮವಹಿಸತಕ್ಕದ್ದು;

(3) ಈ ಜಮೀನುಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 94ಎ ರನ್ವಯ ನಮೂನೆ 50–53ರಲ್ಲಿ ಅರ್ಜಿ ಸಲ್ಲಿಸಿ ಮಂಜೂರಾಗಿರುವ ಜಮೀನುಗಳಿಗೆ ಕೆ.ಐ.ಎ.ಡಿ.ಬಿ. ವತಿಯಿಂದ ಪರಿಹಾರ ಪಾವತಿಸತಕ್ಕದ್ದು.

(4) ಸದರಿ ಜಮೀನುಗಳಿಗೆ ಸಂಬಂಧಿಸಿದಂತೆ ಯಾವುದೇ ನ್ಯಾಯಾಲಯದಲ್ಲಿ ಪ್ರಕರಣ ಬಾಕಿ ಇದ್ದಲ್ಲಿ ಅವುಗಳಲ್ಲಿ ಹೊರಬರುವ ತೀರ್ಪುಗಳಿಗೆ ಬದ್ಧರಾಗಿರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ–1).

**ಅನುಬಂಧ**

| **ಮೈಸೂರು ಜಿಲ್ಲೆ.** | | | |
|---|---|---|---|
| **ತಾಲ್ಲೂಕು** | **ಗ್ರಾಮ** | **ಸರ್ವೆ ನಂಬರ್** | **ವಿಸ್ತೀರ್ಣ** |
| ನಂಜನಗೂಡು ತಾಲ್ಲೂಕು | ಇಮ್ಮಾವು | 371/P,<br>525<br>547 | 299–38 |
| ಮೈಸೂರು ತಾಲ್ಲೂಕು | ಕೂರ್ಗಹಳ್ಳಿ | 132, 96<br>123–160<br>278 | 189–02 |
| | ಕಡಕೊಳ | 209 | 25–00 |
| | ಹೆಬ್ಬಾಳ | 80 | 5–09 |
| ನಂಜನಗೂಡು ತಾಲ್ಲೂಕು | ಅಡಕನಹಳ್ಳಿ | 131 | 0–30 |
| | ಅಡಕನಹಳ್ಳಿ | 81 | 16–00 |
| | ತಾಂಡವಪುರ | 43<br>55 | 29–26 |
| | ಅಡಕನಹಳ್ಳಿ<br>ತಾಂಡವಪುರ | 83<br>37, 59, 60, 84 | 7–27<br>9–09 |
| | | ಒಟ್ಟು | **582–21** |
| **ಮಂಡ್ಯ ಜಿಲ್ಲೆ.** | | | |
| ಶ್ರೀರಂಗಪಟ್ಟಣ | ಅವ್ವೇರಹಳ್ಳಿ<br>ಬಸ್ತೀಪುರ | 6, 8, 9, 10, 29, 36ಪಿ, 37, 52ಪಿ, 51, 55, 131, 135, 136<br>64, 80 | 73–27<br>1–37 |
| | ಬೆಳಗೊಳ<br>ಪುರ<br>ಅಣಗಳ್ಳಿ | 11,49, 1159, 1170, 1207,1211<br>8ಪಿ, 10/1, 16<br>33, 40, 43, 95, 96/1ಪಿ | 8–13<br>9–36<br>3–15 |
| ಮದ್ದೂರು ತಾಃ | ಗೆಜ್ಜಲಗೆರೆ | 186, 197 | 3–32 |
| ಶ್ರೀರಂಗಪಟ್ಟಣ ತಾಲ್ಲೂಕು | ಕೆ.ಆರ್.ಪೇಟೆ<br>ಬಣ್ಣೇನಹಳ್ಳಿ | 20, 21, 24/ 70, 143, 198, 206 | 59–18 |
| | | ಒಟ್ಟು | **160–01** |
| **ವಿಜಯಪುರ ಜಿಲ್ಲೆ** | | | |
| ವಿಜಯಪುರ ತಾಲ್ಲೂಕು | ಇಟ್ಟಂಗಿಹಾಳ | 7/ಎ, & 43/1ಎ | 369–00 |
| | ಶಿರನಾಳ | 93,94,95 | 56–26 |
| | | ಒಟ್ಟು | **425–26** |

| | | | |
|---|---|---|---|
| **ಬೆಳಗಾವಿ ಜಿಲ್ಲೆ** | | | |
| **ಬೆಳಗಾವಿ ತಾಃ** | ಹುಕ್ಕೇರಿ, ವಂಟಮೂರಿ | 51/1, 52/1, 52/9, 54/5, 54/6, 54/7, 54/8, 54/9, 51/5, 56/28 | 1370–26 |
| | ಹುಕ್ಕೇರಿ, ವಂಟಮುರಿ | 25, 31, 33, 38, 39, 40, 44, 45, 46, 50, 129 | 2360–00 |
| | ಸಿಕ್ಕೋಡಿ ವಂಟಮುರಿ | 184 | 150–00 |
| | | **ಒಟ್ಟು** | **3880–26** |
| **ಕೋಲಾರ ಜಿಲ್ಲೆ** | | | |
| ಕೋಲಾರ ತಾಲ್ಲೂಕು | ಜಕ್ಕಸಂದ್ರ | 16,47,59 | 84–01 |
| | | **ಒಟ್ಟು** | **84–01** |
| **ಚಿಕ್ಕಬಳ್ಳಾಪುರ ಜಿಲ್ಲೆ** | | | |
| ಗೌರಿಬಿದನೂರು | ಕುದುಮಲಕುಂಟೆ | 17,18 | 32–23 |
| | | **ಒಟ್ಟು** | **32–23** |
| **ತುಮಕೂರು ಜಿಲ್ಲೆ.** | | | |
| ತುಮಕೂರು ತಾಲ್ಲೂಕು | ನಾಗೇನಹಳ್ಳಿ | 12ಪಿ, 16, 17, 48ಪಿ, | 38–15 |
| | ತಿಮ್ಮರಾಜನಹಳ್ಳಿ | 9P | 14–36 |
| | ಯಲ್ಲದಡ್ಲು | 6, 7, 8, 9, 14, 21P, 38, 46, 51, 69P, 72/1P1, 75, 88, 92, 136, 152, 110 to 115. | 179–17 |
| | ನಾಗೇನಹಳ್ಳಿ | 3, 12, 67 | 37–06 |
| ತುಮಕೂರು ತಾಲ್ಲೂಕು | ಕೆಂಪನದೊಡ್ಡೇರಿ | 90/1 | 17–36 |
| | ಬತ್ಸಂದ್ರ | 33 | |
| | ಕಂಚೇನಹಳ್ಳಿ | 30P, 31, 32, | |
| | ಸಂಗೇನಹಳ್ಳಿ | 17 | |
| | ತಿಪ್ಪೇದಾಸರಹಳ್ಳಿ | 14, 15 | |
| | ಬಹುಜನಹಳ್ಳಿ | 8 | |
| | ಅಂತರಸನಹಳ್ಳಿ | 23 | 0–21 |
| | ತುಮಕೂರು ತಾಃ ಸೋರೆಕುಂಟೆ | 41 | 275–23 |
| ತುಮಕೂರು ತಾಲ್ಲೂಕು | ಗೌಡನಹಳ್ಳಿ | 3, 4, 5, 16, 17, 19/1, 20/8, 21, 26, 27, 28,29, 30, 31, 32 | 103–10 |
| | ಪಿ. ಗೊಲ್ಲಹಳ್ಳಿ | 8, 9, 73 | 45–08 |
| | ಪುರುಡುಕುಂಟೆ | 15 | 28–10 |
| ಶಿರಾ ತಾ, | ಮುದಿಗೆರೆ ಕಾವಲ್ | 7, 12, 15, 16, 40, 45, 46, 67, 69, 74, 80, 90, 96, 553, 575 | 818–27 |
| | ಹುಂಜನಾಳು | 14, 26, 31, 32, 33, 36, 43, 44, 50, 54, 56, 57, 58, 59, 60, 63, 66, 68, 70, 102, 115 314, 318, 378, 382 | 607–19 |
| | ಮಲೇನಹಳ್ಳಿ | 29/6, 30, 32, 33, 34, 35, 37 | 209–22 |
| | ಚಿಕ್ಕಶೀಬಿ | 47, 58, 106, 84 | 19–22 |

| | | | |
|---|---|---|---|
| ತುಮಕೂರು ತಾಃ | ಸೋಮಸಾಗರ | 5, 9/1 ,9/3, 11 | 21–20 |
| | ನೆಲಹಾಳು | 5,6,11/9,18/1,36/1 | 15–00 |
| | ಚಿಕ್ಕಶೀಬಿ | 19,35,40,43,45 | 57–23 |
| | ಕೆಂಪದಾಳಿ ಹಳ್ಳಿ | 9,46 | 46–38 |
| ಶಿರಾ ತಾ. ಶೀಬಿ | | 2/6,44/3,147,148,149,<br>150,151,152,153,165 | 397–07 |
| | ತಿಪ್ಪನಹಳ್ಳಿ | 8, 9, 28, 40, 86/2, 89, 98, 156.158 | 86–15 |
| | ಬೋರಸಂದ್ರ | 9,22,25,34,49/1 | 11–29 |
| | | **ಒಟ್ಟು** | **3032–04** |
| **ಹಾಸನ ಜಿಲ್ಲೆ** | | | |
| ಹಾಸನ ತಾಲ್ಲೂಕು | ಕಾಚನಾಯಕನಹಳ್ಳಿ<br>ದೊಡ್ಡಹೊನ್ನೇನಹಳ್ಳಿ<br>ಬುಸ್ತೇನಹಳ್ಳಿ | 49<br>4, 33, 78, 83, 85,<br>20, 61, 21 | 8–16<br>18–13<br>8–30 |
| ಹಾಸನ ತಾಲ್ಲೂಕು | ಪಿರುಮೇನಹಳ್ಳಿ<br>ದೊಡ್ಡಬಸವನಹಳ್ಳಿ<br>ಕಸ್ತೂರವಳ್ಳಿ<br>ಗವೇನಹಳ್ಳಿ, | 21, 26, 28, 39, 42<br>135, 149<br>26, 42, 44<br>25, 26, 40, 118, 119 | 4–00<br>9–30<br>9–20<br>8–01 |
| | | **ಒಟ್ಟು** | **66–30** |
| **ಬಳ್ಳಾರಿ ಜಿಲ್ಲೆ** | | | |
| ಸಂಡೂರು ತಾಃ | ದವಲತ್‌ಪುರ, | 35, 36, 37, 40, 41, 44, 56,<br>184, 186, 190, 191, 192, 193,<br>224, 326, 338 ರಿಂದ 374 ಇತರೆ | 37–14 |
| | | **ಒಟ್ಟು** | **37–14** |
| **ಶಿವಮೊಗ್ಗ ಜಿಲ್ಲೆ** | | | |
| ಶಿಕಾರಿಪುರ ತಾಃ | ಸಂಡ | 102, 104, 129,<br>119, 121, 122, 215, 216, 217, 234, 237 | 8–01<br>6–05 |
| ಶಿಕಾರಿಪುರ ತಾಃ | ಸೋಗಾನೆ | 120ಪಿ | 580–20 |
| | | **ಒಟ್ಟು** | **594–26** |
| **ದಕ್ಷಿಣ ಕನ್ನಡ ಜಿಲ್ಲೆ** | | | |
| ಬಂಟ್ವಾಳ ತಾಃ | ಕುರ್ನಾಡು<br>ಚೇಳೂರು<br>ಬಾಳೆಪುಣಿ<br>ಇರಾ | 176/4ಎ, 181/6, 182/2ಬಿ3, 187/2,4,<br>194/4, 195/2, 196/1, 197/1<br>95/1, 96/1ಬಿ, 97, 99/3 ಮತ್ತು ಇತರೆ<br>23/2, 23/5ಎ, 24/2<br>60/2, 165/1ಎ,1ಡಿ,1ಇ, 166/2 ಮತ್ತು ಇತರೆ | 43–23<br><br>47–05<br>0–26<br>84–33 |
| ಮಂಗಳೂರು ತಾಃ | ಬಡಗ, ಉಳಿಪಾಡಿ<br>ಮೊಗರು | 145/4, 181/1ಬಿ, 2ಬಿ, 3ಬಿ, 212/2ಎ<br>228/4, 71/2, 72/1 | 5–34<br>2–29 |

| | | | |
|---|---|---|---|
| ಬಂಟ್ವಾಳ ತಾ, | ಬಾಳೆಪುಣಿ, ಕುರ್ನಾಡು | 2/1, 3/2ಎ1, 24/2<br>151, 159, 166, 168, 169, 170 | 3–28<br>39–18 |
| | | ಒಟ್ಟು | **228–19** |
| **ಚಿತ್ರದುರ್ಗ ಜಿಲ್ಲೆ** | | | |
| ಹಿರಿಯೂರು ತಾಲ್ಲೂಕು | ಪಿಲಾಲಿ | 38<br>39P<br>64 | 132–38<br>99–20<br>308–11<br>**540–29** |
| ಹೊಳ್ಳೆಕೆರೆ ತಾಲ್ಲೂಕು, | ಗುಂಡೇರಿಕಾವಲ್ | 27/P1 | 600–00 |
| | | ಒಟ್ಟು | **1140–29** |
| **ಚಾಮರಾಜನಗರ ಜಿಲ್ಲೆ.** | | | |
| ಚಾಮರಾಜನಗರ ತಾಲ್ಲೂಕು | ಕೆಲ್ಲಂಬಳ್ಳಿ | 69, 387, 453, 460, 477, 118,119 | 238–08 |
| | | ಒಟ್ಟು | **238–08** |
| **ಹಾವೇರಿ ಜಿಲ್ಲೆ** | | | |
| ರಾಣೆಬೆನ್ನೂರು ತಾಲ್ಲೂಕು | ಮಾಗೋಡು | 11ಅ<br>13 | 100–23<br>62–36 |
| | | ಒಟ್ಟು | **162–38** |
| **ರಾಮನಗರ ಜಿಲ್ಲೆ** | | | |
| ಕನಕಪುರ ತಾಲ್ಲೂಕು | ಬನ್ನಿಕುಪ್ಪೆ, ಚೀಲೂರು | 20,31,127,221 | 147–17 |
| | | ಒಟ್ಟು | **147–17** |
| | | **ಒಟ್ಟಾರೆ** | **10814–15** |

**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ.ಮಂ–1).

**PR. 91**
**SC. 50**

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ ನೇರ ಸಾಲ ಪದ್ಧತಿಯಡಿ ರಾಜ್ಯ ಸರ್ಕಾರದ ಶೇ.5 ರ ಭಾಗದ ವಂತಿಗೆ ಬಿಡುಗಡೆ ಮಾಡುವ ಕುರಿತು ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಇ 22 ಆಂಆಸ 2015, ದಿನಾಂಕ:08.05.2015.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್‌ಸಿಎಸ್/ಎಲ್‌ಡಿಬಿ–1/30/2015–16, ದಿನಾಂಕ:04–12–2015

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2015–16 ನೇ ಸಾಲಿಗೆ ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು ನೇರ ಸಾಲ ಪದ್ಧತಿಯಡಿ ನಬಾರ್ಡ್‌ನಿಂದ ಪುನರ್ಧನ ಪಡೆಯುವ ಯೋಜನೆ ಲೆಕ್ಕ ಶೀರ್ಷಿಕೆ 6416–00–190–1–01–395 ರಡಿ ₹. 500.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ:01.04.2015ರಿಂದ 31.03.2016ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು (ಕಸ್ಕಾರ್ಡ್ ಬ್ಯಾಂಕ್) ನೇರ ಸಾಲದ ಮೂಲಕ ಮುನರ್ಧನ ಬಿಡುಗಡೆಗಾಗಿ ನಬಾರ್ಡ್ ಸಂಸ್ಥೆಗೆ ಸಲ್ಲಿಸಿದ ಪ್ರಸ್ತಾವನೆಯನ್ನು ಪರಿಗಣಿಸಿ ನಬಾರ್ಡ್ ಕಸ್ಕಾರ್ಡ್ ಬ್ಯಾಂಕ್‌ಗೆ ಅರ್ಹ ಮೊತ್ತವಾಗಿ ಪರಿಗಣಿಸಿರುವ ₹.1,39,38,45,300/– ಮೊತ್ತದಲ್ಲಿ ತನ್ನ ಪಾಲಿನ ಶೇ.90 ರಷ್ಟು ಮುನರ್ಧನ ರೂ. ರೂ.1,25,40,59,700/– ಮೊತ್ತವನ್ನು ದಿನಾಂಕ:26.10.2015 ರಂದು ಕಸ್ಕಾರ್ಡ್ ಬ್ಯಾಂಕಿಗೆ ಬಿಡುಗಡೆ ಮಾಡಿದ್ದು, ರಾಜ್ಯ ಸರ್ಕಾರದ ವಂತಿಗೆ ಶೇ.5 ರಷ್ಟು ಅಂದರೆ ₹.6,98,92,800/– ಗಳನ್ನು ಕಸ್ಕಾರ್ಡ್ ಬ್ಯಾಂಕಿಗೆ ಬಿಡುಗಡೆ ಮಾಡಲು ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಓ 27 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ: 13.01.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು ನೇರ ಸಾಲ ಪದ್ಧತಿಯ ಯೋಜನೆ ಲೆಕ್ಕ ಶೀರ್ಷಿಕೆ 6416–00–190–1–01–395ರಡಿ ರಾಜ್ಯ ಸರ್ಕಾರದ ಶೇ.5ರ ಭಾಗದ ವಂತಿಗೆಯಾದ ₹.6,98,92,800/–ಗಳ ಪೈಕಿ ರೂ.5,00,00,000/–(ಐದು ಕೋಟಿ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿರುವ ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಖಾತೆಗೆ ಜಮಾ ಮಾಡತಕ್ಕದ್ದು ಮತ್ತು ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 374 ವೆಚ್ಚ–2/2015, ದಿನಾಂಕ:05.01.2016 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

PR. 85
SC. 10

## ಸಹಕಾರ ಸಚಿವಾಲಯ

**ವಿಷಯ:** 2015–16ನೇ ಸಾಲಿಗೆ ನಿರ್ದೇಶನ ಮತ್ತು ಆಡಳಿತ–125–ಆಧುನೀಕರಣ ಯೋಜನೆಯಡಿ ಅನುದಾನ ಬಿಡುಗಡೆ ಕುರಿತು ಆದೇಶ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸಇ 22 ಆಂಆಸ 2015, ಬೆಂಗಳೂರು, ದಿನಾಂಕ:08.05.2015.
2. ಸರ್ಕಾರದ ಆದೇಶ ಸಂಖ್ಯೆ:ಸಿಓ 185 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ:12.06.2015, 30.10.2015 ಮತ್ತು 19.12.2015.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್‌ಸಿಎಸ್/ ಎಸ್‌ವಿಓ/09/2015–16, ದಿನಾಂಕ:20.11.2015.
4. ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/04/ಟಿಎಫ್‌ಪಿ/2015, ಬೆಂಗಳೂರು, ದಿನಾಂಕ:09.10.2015.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ 2015–16ನೇ ಸಾಲಿನ ಮುಂದುವರೆದ ಯೋಜನೆಯಾದ ನಿರ್ದೇಶನ ಮತ್ತು ಆಡಳಿತ–125–ಆಧುನೀಕರಣ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–001–0–01–125 ಆಧುನೀಕರಣ ರಡಿ ₹. 15.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ:01.04.2015 ರಿಂದ 31.03.2016 ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (2) ರ ಸರ್ಕಾರಿ ಆದೇಶಗಳಲ್ಲಿ ಈ ಯೋಜನೆಯಡಿ ಮೊದಲನೇ, ಎರಡನೇ ಮತ್ತು ಮೂರನೇ ತ್ರೈಮಾಸಿಕದಲ್ಲಿ ತಲಾ ರೂ.3.75 ಲಕ್ಷಗಳಂತೆ ಒಟ್ಟು ರೂ.11.25 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (3) ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯಡಿ ಬಿಡುಗಡೆಯಾಗಿರುವ ಮೊದಲನೇ, ಎರಡನೇ ಮತ್ತು ಮೂರನೇ ಕಂತಿನ ಅನುದಾನ ₹.11.25 ಲಕ್ಷಗಳಲ್ಲಿ ₹.10.04 ಲಕ್ಷಗಳನ್ನು ಉಪಯೋಗಿಸಿಕೊಂಡಿರುವುದಾಗಿ ಬಳಕೆ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸಿ 4ನೇ ಕಂತಿನ ಅನುದಾನ ₹.3.75 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ:ಸಿಒ 185 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ: 06.02.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2015–16ನೇ ಸಾಲಿನ ಯೋಜನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಲೆಕ್ಕ ಶೀರ್ಷಿಕೆ 2425–00–001–0–01 ನಿರ್ದೇಶನ ಮತ್ತು ಆಡಳಿತ–125–ಆಧುನೀಕರಣ ಯೋಜನೆಯಲ್ಲಿ ಲಭ್ಯವಿರುವ ಅನುದಾನದಲ್ಲಿ ನಾಲ್ಕನೇ ತ್ರೈಮಾಸಿಕದಲ್ಲಿ ₹.3.75 ಲಕ್ಷ(ಮೂರು ಲಕ್ಷದ ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ನಿಬಂಧಕರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ. ಈ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2016, ದಿನಾಂಕ:19.01.2016ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಾಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ–3,

ಸಹಕಾರ ಇಲಾಖೆ

PR. 146

SC. 25

## ಸಹಕಾರ ಸಚಿವಾಲಯ

**ವಿಷಯ:** 2015–16ನೇ ಸಾಲಿಗೆ ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಅನುದಾನ ಬಿಡುಗಡೆ ಕುರಿತು ಆದೇಶ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸಇ 22 ಆಂಆಸ 2015, ಬೆಂಗಳೂರು, ದಿನಾಂಕ:08.05.2015.
2. ಸರ್ಕಾರದ ಆದೇಶ ಸಂಖ್ಯೆ:ಸಿಒ 184 ಸಿಎಲ್‌ಎಸ್ 2015, ದಿನಾಂಕ:16.06.2015,28.09.2015 ಮತ್ತು 19–12–2015
3. ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/01/ಟಿಎಫ್‌ಪಿ/2016, ದಿನಾಂಕ:19.01.2016.
4. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಸಿಬ್ಬಂದಿ/26/ಇಜಿಪಿ/2015–16, ದಿನಾಂಕ:20.11.2015.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2015–16ನೇ ಸಾಲಿನ ಮುಂದುವರೆದ ಯೋಜನೆಯಾಗಿ ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–004–0–01–059ರಡಿ ₹.5.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ:01.04.2015 ರಿಂದ 31.03.2016 ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ 2015–16ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2425–00–004–0–01–059 ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಮೊದಲ ಮೂರು ಕಂತುಗಳಲ್ಲಿ ತಲಾ ₹. 1.25 ಲಕ್ಷಗಳಂತೆ ಒಟ್ಟು ₹.3.75 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಮೂರು ಕಂತುಗಳಲ್ಲಿ ಬಿಡುಗಡೆಯಾಗಿರುವ ₹.3.75ಲಕ್ಷಗಳ ಪೈಕಿ ₹.3.65ಲಕ್ಷಗಳನ್ನು ಅಂದರೆ ಬಿಡುಗಡೆಯಾದ ಮೊಬಲಗಿನ ಶೇ.97ರಷ್ಟು ಮೊತ್ತವನ್ನು ಉಪಯೋಗಿಸಿಕೊಂಡಿರುವುದಾಗಿ ಬಳಕೆ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸಿ 4ನೇ ಕಂತಿನ ಅನುದಾನ ₹.1.25 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ:ಸಿಒ 184 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ: 06.02.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2015–16ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2425–00–004–0–01–059 ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ 4ನೇ ಕಂತಿನ ಅನುದಾನ ₹. 1.25 ಲಕ್ಷ (ಒಂದು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ನಿಬಂಧಕರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ. ಈ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2016, ದಿನಾಂಕ:19.1.2016ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಸಇ 09 ಆಂಆಸ 2016, ದಿನಾಂಕ:29.01.2016ರಲ್ಲಿ ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಾಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ–3,

ಸಹಕಾರ ಇಲಾಖೆ

**PR. 147**

**SC. 25**

## ಕಂದಾಯ ಸಚಿವಾಲಯ

**ವಿಷಯ:–** ಮಂಡ್ಯ ತಾಲ್ಲೂಕು, ದುದ್ದ ಹೋಬಳಿ, ಹೆಚ್.ಮಲ್ಲಿಗೆರೆ ಗ್ರಾಮದ ಸರ್ವೆ ನಂ.49ರಲ್ಲಿ 20 ಎಕರೆ ಜಮೀನನ್ನು ಮಹಾತ್ಮ ಗಾಂಧಿ ಸ್ಮಾರಕ ಟ್ರಸ್ಟ್ (ರಿ), ಮಂಡ್ಯರವರಿಗೆ ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ:–** 1) ತೋಟಗಾರಿಕಾ ಇಲಾಖೆಯ ಕಡತ ಸಂಖ್ಯೆ: ತೋಇ 02 ರೇಯೋವಿ 2012

2) ಜಿಲ್ಲಾಧಿಕಾರಿ, ಮಂಡ್ಯ ಜಿಲ್ಲೆ, ಮಂಡ್ಯ ರವರ ಪತ್ರ ಸಂಖ್ಯೆ: ಎಲ್‌ಎನ್‌ಡಿ(1) 29/2015–16 ದಿನಾಂಕ 02–06–2015 ಮತ್ತು 09–06–2015.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಕಡತದಲ್ಲಿ ತೋಟಗಾರಿಕೆ ಇಲಾಖೆಯು ಕಂದಾಯ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿ, ಮಹಾತ್ಮ ಗಾಂಧಿ ಸ್ಮಾರಕ ಟ್ರಸ್ಟ್ (ರಿ), ಮಂಡ್ಯ, ರವರಿಗೆ 20 ಎಕರೆ ಜಮೀನನ್ನು ಮಂಜೂರು ಮಾಡಲು ಕೋರಿದೆ. ಅಂದಿನ ಪ್ರಧಾನ ಕಾರ್ಯದರ್ಶಿ, ತೋಟಗಾರಿಕೆ ಇಲಾಖೆರವರು ದಿನಾಂಕ: 29.07.2013ರಂದು ಪ್ರಸ್ತಾವಿತ ಜಮೀನು ಮಂಜೂರಾತಿ ಕುರಿತಂತೆ ಸ್ಥಳ ಪರಿಶೀಲನೆ ಮಾಡಿ ಟ್ರಸ್ಟ್‌ನ ಚಟುವಟಿಕೆಗಳ ಕುರಿತು ವರದಿ ಸಲ್ಲಿಸಿದ್ದಾರೆ. ಅದರನ್ವಯ ಸದರಿ ಟ್ರಸ್ಟ್ ವತಿಯಿಂದ ಗಾಂಧಿ ಗ್ರಾಮ ಸ್ಥಾಪಿಸಿ ಅದರಲ್ಲಿ ಗುಡಿ ಕೈಗಾರಿಕಾ ತರಬೇತಿ, ಸ್ತ್ರೀಯರಿಗೆ ಹೊಲಿಗೆ ಮತ್ತು ಸಿದ್ಧ ಉಡುಪು, ಗಣಕ ಶಿಕ್ಷಣ ಮುಂತಾದ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ಉದ್ದೇಶಿಸಿದ್ದು, ಪ್ರಸ್ತಾವಿತ ಗಾಂಧಿ ಭವನದ ಉದ್ದೇಶಗಳು ಸಾಮಾಜಿಕ ಸೇವೆ ಮತ್ತು ಸಮಾಜದಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ಜ್ಞಾನವನ್ನು ಹರಡುವುದಾಗಿದೆ ಎಂದು ತಿಳಿಸಿದ್ದಾರೆ. ಮುಂದುವರೆದು, ಸದರಿ ಟ್ರಸ್ಟ್ ಒಂದು ಸಂಚಾರಿ ವಾಹನ ಸಹ ಹೊಂದಿದ್ದು; ಗಾಂಧಿ ಸಾಹಿತ್ಯ ಮತ್ತು ತತ್ವಗಳನ್ನು ಜಿಲ್ಲೆಯ ಎಲ್ಲಾ ಹಳ್ಳಿಗಳಲ್ಲಿ ಹರಡಲು ಅದನ್ನು ಬಳಸಲಾಗುತ್ತಿದೆ ಎಂದು ವರದಿ ಮಾಡಿದ್ದಾರೆ. ಅಲ್ಲದೆ, ಟ್ರಸ್ಟ್‌ನ ಲೆಕ್ಕ ಪರಿಶೋಧನಾ ವರದಿಗಳನ್ನು ಸಹ ಸ್ಥಳ ಪರಿಶೀಲನಾ ಸಮಯದಲ್ಲಿ ಪಡೆದಿದ್ದು, ಆ ಸಮಯದಲ್ಲಿ ₹. 27,75,000/– ಠೇವಣಿ ಇತ್ತೆಂದು ತಿಳಿಸಿದ್ದಾರೆ. ಈ ಎಲ್ಲಾ ಅಂಶಗಳನ್ನು ದಾಖಲಿಸಿ ಸದರಿ ಟ್ರಸ್ಟ್‌ಗೆ 20 ಎಕರೆ ಜಮೀನನ್ನು ಮಂಜೂರು ಮಾಡುವ ಪ್ರಸ್ತಾವನೆಗೆ ಮಾನ್ಯ ಮುಖ್ಯಮಂತ್ರಿಯವರ ಅನುಮೋದನೆಯನ್ನು ಪಡೆದು ತೋಟಗಾರಿಕೆ ಇಲಾಖೆ ಕಂದಾಯ ಇಲಾಖೆಯ ಸಹಮತಿ ಕೋರಿ ಪ್ರಸ್ತಾವನೆ ಸಲ್ಲಿಸಿದೆ.

ಈ ಕುರಿತು ಅಧ್ಯಕ್ಷರು, ಮಹಾತ್ಮ ಗಾಂಧಿ ಸ್ಮಾರಕ ಟ್ರಸ್ಟ್ (ರಿ), ಮಂಡ್ಯ, ಇವರು ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕು, ದುದ್ದ ಹೋಬಳಿ, ಹೆಚ್.ಮಲ್ಲಿಗೆರೆ ಗ್ರಾಮದ ಸರ್ವೆ ನಂ.49ರಲ್ಲಿ 20 ಎಕರೆ ಜಮೀನನ್ನು ಗಾಂಧಿ ಗ್ರಾಮ ನಿರ್ಮಿಸಿ ನಿರುದ್ಯೋಗಿ ಯುವ ಜನರಿಗೆ ತರಬೇತಿ ನೀಡಿ ಗುಡಿ ಕೈಗಾರಿಕೆಗಳನ್ನು ಸ್ಥಾಪಿಸಲು ಮಂಜೂರು ಮಾಡುವಂತೆ ಕೋರಿದ್ದಾರೆ. ಸದರಿ ಗ್ರಾಮದಲ್ಲಿನ ಸರ್ವೆ ನಂ.49ರಲ್ಲಿ 100 ಎಕರೆ ಜಮೀನನ್ನು (ಪಹಣಿ ಪ್ರಕಾರ 99 ಎಕರೆ) ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 142 ಎಲ್‌ಆರ್‌ಎಂ 78, ದಿನಾಂಕ: 01.01.1980ರಲ್ಲಿ ರೇಷ್ಮೆ ಇಲಾಖೆಯ ಬಳಕೆಗಾಗಿ ತೋಟಗಾರಿಕೆ ಇಲಾಖೆಗೆ ಮಂಜೂರು ಮಾಡಲಾಗಿದೆ. ಈ ಜಮೀನಿನ ಪೈಕಿ 9–30 ಎಕರೆ ಜಮೀನನ್ನು ಕಂದಾಯ ಇಲಾಖೆ ವಶದಲ್ಲಿದೆ ಹಾಗೂ 40 ಎಕರೆ ಜಮೀನನ್ನು ಕಾರಾಗೃಹ ಇಲಾಖೆಗೆ ಮಂಜೂರು ಮಾಡಲು ಕಂದಾಯ ಇಲಾಖೆಯು ತೋಟಗಾರಿಕೆ ಇಲಾಖೆಗೆ 2013ರಲ್ಲಿ ಸಹಮತಿ ನೀಡಿದೆ.

ಈ ವಿಷಯದ ಬಗ್ಗೆ ಜಿಲ್ಲಾಧಿಕಾರಿ, ಮಂಡ್ಯರವರು ದಿನಾಂಕ: 02.06.2015 ಮತ್ತು 09.06.2015ರ ಪತ್ರಗಳಲ್ಲಿ ಸರ್ಕಾರಕ್ಕೆ ವರದಿಗಳನ್ನು ಸಲ್ಲಿಸಿದ್ದಾರೆ. ಸದರಿ ವರದಿಗಳ ಪ್ರಕಾರ, ಹೆಚ್.ಮಲ್ಲಿಗೆರೆ ಗ್ರಾಮದ ಸರ್ವೆ ನಂಬರ್ 49ರಲ್ಲಿ ಆರ್.ಟಿ.ಸಿ.ಯಂತೆ 99 ಎಕರೆ ಜಮೀನಿದ್ದು, ಈ ಪೈಕಿ 89–10 ಎಕರೆ ರೇಷ್ಮೆ ಇಲಾಖೆಗೆ ಮಂಜೂರಾಗಿದ್ದು, 9–30 ಎಕರೆ ಕಂದಾಯ ಇಲಾಖೆಗೆ ಸೇರಿದೆ. ಅದರಲ್ಲಿ 40 ಎಕರೆ ಕಾರಾಗೃಹ ಇಲಾಖೆಗೆ ಮಂಜೂರು ಮಾಡಲಾಗಿದೆ ಹಾಗೂ ರೇಷ್ಮೆ ಇಲಾಖೆಯ ಕಛೇರಿ ಕಟ್ಟಡಗಳು ಇರುವ ಪ್ರದೇಶವು 15–30 ಎಕರೆ ಆಗಿದೆ. ಸದರಿ ಪ್ರದೇಶವನ್ನು ಹೊರತುಪಡಿಸಿ, ಉಳಿದ 33–20 ಎಕರೆ ಜಮೀನಿನಲ್ಲಿ ರೇಷ್ಮೆ ಇಲಾಖೆ ಯಾವುದೇ ಚಟುವಟಿಕೆ ನಡೆಸದೆ ಖಲ್ಲಾ ಇರುವ ಪ್ರದೇಶವಾಗಿರುವುದರಿಂದ ಹಾಗೂ ಕೆಲವು ಸರ್ಕಾರಿ ಇಲಾಖೆಗಳಿಂದ ಸಾರ್ವಜನಿಕ ಉಪಯೋಗಕ್ಕಾಗಿ ಜಮೀನಿನ ಬೇಡಿಕೆ ಬಂದಿರುವುದರಿಂದ; ಸದರಿ ಜಮೀನನ್ನು ರೇಷ್ಮೆ ಇಲಾಖೆಯಿಂದ ಹಿಂಪಡೆದು ಬೇಡಿಕೆ ಇರುವ ಇಲಾಖೆಗಳಿಗೆ ಕಾಯ್ದಿರಿಸುವುದು ಸೂಕ್ತವಾಗಿದೆ ಎಂದು ತಿಳಿಸಿದ್ದಾರೆ. ಮುಂದುವರೆದು, ಸದರಿ ಮಹಾತ್ಮ ಗಾಂಧಿ ಸ್ಮಾರಕ ಟ್ರಸ್ಟ್ (ರಿ) ಖಾಸಗಿ ಸಂಸ್ಥೆಯಾಗಿದ್ದು, ಸರ್ಕಾರಿ ಸುತ್ತೋಲೆ ದಿನಾಂಕ: 05.01.2007ರ ಪ್ರಕಾರ ಅದಕ್ಕೆ ಜಮೀನು ಮಂಜೂರು ಮಾಡಲು ಅವಕಾಶವಿಲ್ಲವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಗೋಮಾಳ ಜಮೀನುಗಳನ್ನು ಖಾಸಗಿ ವ್ಯಕ್ತಿಗಳಿಗೆ ಮಂಜೂರು ಮಾಡಬಾರದೆಂದು ಸೂಚನೆಗಳನ್ನು ಹಿಂದೆ ಹೊರಡಿಸಿದ್ದ ಸುತ್ತೋಲೆಯು ಇದಾಗಿದೆ.

ಪರಿಶೀಲಿಸಲಾಗಿ, ಸದರಿ ಸರ್ಕಾರಿ ಜಮೀನು ರೇಷ್ಮೆ ಇಲಾಖೆಗೆ ಮಂಜೂರಾದ ಜಮೀನಾಗಿದೆ. ತೋಟಗಾರಿಕೆ ಇಲಾಖೆಯು ಸದರಿ ಮಹಾತ್ಮ ಗಾಂಧಿ ಸ್ಮಾರಕ ಟ್ರಸ್ಟ್(ರಿ) ವತಿಯಿಂದ ಗಾಂಧಿ ಭವನ ನಿರ್ಮಾಣ ಮಾಡಲು ಒಪ್ಪಿಗೆಯನ್ನು ಸೂಚಿಸಿ 20 ಎಕರೆ ಜಮೀನು ಮಂಜೂರು ಮಾಡಲು ಶಿಫಾರಸ್ಸು ಮಾಡಿದೆ. ರೇಷ್ಮೆ ಇಲಾಖೆಗೆ ನೀಡಲಾಗಿರುವ ಜಮೀನಿನಲ್ಲಿ ಕೆಲವು ಭಾಗಗಳಲ್ಲಿ ಆ ಇಲಾಖೆಗೆ ಸೇರಿದ ಕಟ್ಟಡಗಳಿವೆ. ಇದರಿಂದಾಗಿ ಗೋಮಾಳ

ಲಕ್ಷಣಗಳನ್ನು ಸದರಿ ಪ್ರದೇಶ ಕಳೆದುಕೊಂಡಿದೆ. ಸದರಿ ಪ್ರದೇಶದಲ್ಲಿನ ಭಾಗಶ: ಜಮೀನನ್ನು ಪ್ರಸ್ತಾವಿತ ಗಾಂಧಿ ಭವನ ನಿರ್ಮಾಣಕ್ಕೆ ಸದರಿ ಖಾಸಗಿ ಟ್ರಸ್ಟ್‌ಗೆ ನೀಡಬೇಕಿದ್ದು, ಕರ್ನಾಟಕ ಭೂ ಕಂದಾಯ ನಿಯಮಗಳು, 1966ರ ನಿಯಮ 97(4)ರನ್ವಯ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ ಮಂಜೂರು ಮಾಡಲು ಅವಕಾಶವಿರುತ್ತದೆ.

ಇದಲ್ಲದೆ, ಇತ್ತೀಚಿನ ಭೂ ನೀತಿ ಆಧರಿಸಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ಕ್ಕೆ ತಿದ್ದುಪಡಿಯನ್ನು ದಿನಾಂಕ: 09.06.2015ರಂದು ತರಲಾಗಿದೆ. ಸದರಿ ನಿಯಮಗಳ ನಿಯಮ 22–ಎ ಪ್ರಕಾರ, ಕಲ್ಯಾಣ ಚಟುವಟಿಕೆಗಳಿಗೆ (ಪ್ರಸ್ತಾವಿತ ಗಾಂಧಿ ಗ್ರಾಮ ಸ್ಥಾಪನೆಯನ್ನು ಕಲ್ಯಾಣ ಚಟುವಟಿಕೆ ಎಂದು ಪರಿಗಣಿಸಬೇಕಾಗುತ್ತದೆ) ಇತರೆ ವರ್ಗದವರಿಗೆ ಮಾರುಕಟ್ಟೆ ಬೆಲೆಯ ಶೇಕಡ 25ರಷ್ಟು ಮೊತ್ತವನ್ನು ವಿಧಿಸಿ ಖಾಸಗಿಯವರಿಗೆ ಜಮೀನು ಮಂಜೂರು ಮಾಡಲು ಅವಕಾಶ ಕಲ್ಪಿಸಲಾಗಿದೆ. ನೋಂದಣಿ ಮತ್ತು ಮುದ್ರಾಂಕ ಇಲಾಖೆ ನಿಗದಿಪಡಿಸಿರುವ ಮಾರುಕಟ್ಟೆ ಬೆಲೆ ಪ್ರಕಾರ, ಹೆಚ್.ಮಲ್ಲಿಗೆರೆ ಗ್ರಾಮದಲ್ಲಿ ಪ್ರತಿ ಎಕರೆ ಖುಷ್ಕಿ ಜಮೀನಿಗೆ ₹.1,36,000/–ರಷ್ಟಿದೆ. ಅದರನ್ವಯ, 20 ಎಕರೆ ಜಮೀನಿನ ಮೌಲ್ಯ ₹.27,20,000/– ಆಗುತ್ತದೆ. ಈ ಮೌಲ್ಯದ ಶೇಕಡ 25ರಷ್ಟು; ಅಂದರೆ, ₹.6,80,000/– ಮೊತ್ತವನ್ನು ಸದರಿ ಟ್ರಸ್ಟ್ ಪಾವತಿಸಬೇಕಾಗುತ್ತದೆ.

ಕೆಲವು ಸರ್ಕಾರಿ ಇಲಾಖೆಗಳಿಂದ ಸದರಿ ಪ್ರದೇಶದಲ್ಲಿ ಜಮೀನು ಮಂಜೂರು ಮಾಡಲು ಬೇಡಿಕೆಗಳನ್ನು ಸ್ವೀಕರಿಸಲಾಗಿದೆ ಎಂದು ಜಿಲ್ಲಾಧಿಕಾರಿರವರು ತಿಳಿಸಿದ್ದರೂ ಸಹ, 20 ಎಕರೆ ಜಮೀನನ್ನು ಮಂಜೂರು ಮಾಡುವ ಕುರಿತ ಈ ಪ್ರಸ್ತಾವನೆಯನ್ನು ಕಳೆದ ಎರಡು ವರ್ಷಗಳಿಂದ ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದೆ. ಮುಂದುವರೆದು, ಈಗಾಗಲೇ ತಿಳಿಸಿದಂತೆ ಅಂದಿನ ಪ್ರಧಾನ ಕಾರ್ಯದರ್ಶಿ, ತೋಟಗಾರಿಕೆ ಇಲಾಖೆರವರು ಸ್ಥಳ ಪರಿಶೀಲನೆ ಮಾಡಿ ವರದಿಯನ್ನು ಸಲ್ಲಿಸಿದ್ದನ್ನು ಆಧರಿಸಿ 20 ಎಕರೆ ಜಮೀನನ್ನು ಸದರಿ ಟ್ರಸ್ಟ್‌ಗೆ ಮಂಜೂರು ಮಾಡಲು ತೋಟಗಾರಿಕೆ ಇಲಾಖೆಯು ಮಾನ್ಯ ಮುಖ್ಯಮಂತ್ರಿರವರ ಅನುಮೋದನೆಯನ್ನು ಪಡೆದು ತೀರ್ಮಾನ ತೆಗೆದುಕೊಂಡಿದೆ. ಸರ್ಕಾರಿ ಇಲಾಖೆಗಳಿಂದ ಜಮೀನು ಮಂಜೂರಾತಿ ಕುರಿತು ಸ್ವೀಕರಿಸಿರುವ ಮನವಿಗಳ ಬಗ್ಗೆ ಸದರಿ ಪ್ರದೇಶದಲ್ಲಿನ ಇತರೆ ಜಾಗಗಳಲ್ಲಿ ಜಮೀನನ್ನು ಮಂಜೂರು ಮಾಡುವ ಕುರಿತು ಪರಿಶೀಲಿಸಲು ಜಿಲ್ಲಾಧಿಕಾರಿರವರಿಗೆ ಸೂಚಿಸಲಾಗುವುದು.

ಮೇಲ್ಕಂಡ ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಪ್ರಸ್ತಾವನೆಯನ್ನು ಸಚಿವ ಸಂಪುಟದ ಮುಂದೆ ಮಂಡಿಸಲಾಗಿ ಮಂಡ್ಯ ತಾಲ್ಲೂಕು, ದುದ್ದ ಹೋಬಳಿ, ಹೆಚ್ ಮಲ್ಲಿಗೆರೆ ಗ್ರಾಮದ ಸ.ನಂ. 49 ರಲ್ಲಿ ರೇಷ್ಮೆ ಇಲಾಖೆಗೆ ಮಂಜೂರಾಗಿರುವ ಜಮೀನಿನ ಪೈಕಿ 10 (ಹತ್ತು) ಎಕರೆ ಜಮೀನನ್ನು ಮಹಾತ್ಮ ಗಾಂಧಿ ಸ್ಮಾರಕ ಟ್ರಸ್ಟ್ (ರಿ), ಮಂಡ್ಯ ಇವರಿಗೆ 30 ವರ್ಷಗಳ ಅವಧಿಗೆ ಮಾರುಕಟ್ಟೆ ಬೆಲೆಯ ಶೇ. 10 ರಷ್ಟನ್ನು ವಾರ್ಷಿಕ ಗುತ್ತಿಗೆ ದರವನ್ನಾಗಿ ನಿಗಧಿಪಡಿಸಿ ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡ ಆದೇಶ:–

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 87 ಎಲ್‌ಜಿವೈ 2013, ದಿನಾಂಕ: 01.01.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮಂಡ್ಯ ಜಿಲ್ಲೆ, ಮಂಡ್ಯ ತಾಲ್ಲೂಕು, ದುದ್ದ ಹೋಬಳಿ, ಹೆಚ್ ಮಲ್ಲಿಗೆರೆ ಗ್ರಾಮದ ಸ.ನಂ. 49 ರಲ್ಲಿ ರೇಷ್ಮೆ ಇಲಾಖೆಗೆ ಮಂಜೂರಾಗಿರುವ ಜಮೀನಿನ ಪೈಕಿ ನಕ್ಷೆಯಲ್ಲಿ ಹಳದಿ ಬಣ್ಣದಲ್ಲಿ ತೋರಿಸಿರುವ ಉಳಿಕೆ ಇರುವ 20 ಎಕರೆ ಜಮೀನಿನ ಪೈಕಿ ಉತ್ತರ ದಿಕ್ಕಿನಲ್ಲಿ 10–00 (ಹತ್ತು) ಎಕರೆ ಜಮೀನನ್ನು ಮಹಾತ್ಮ ಗಾಂಧಿ ಸ್ಮಾರಕ ಟ್ರಸ್ಟ್ (ರಿ), ಮಂಡ್ಯ ಇವರಿಗೆ 30 (ಮೂವತ್ತು) ವರ್ಷಗಳ ಅವಧಿಗೆ ಮಾರುಕಟ್ಟೆ ಬೆಲೆಯ ಶೇ. 10 (ಹತ್ತು) ರಷ್ಟನ್ನು ವಾರ್ಷಿಕ ಗುತ್ತಿಗೆ ದರವನ್ನಾಗಿ ನಿಗಧಿಪಡಿಸಿ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಗುತ್ತಿಗೆ ಆಧಾರದಲ್ಲಿ ನೀಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

**ಷರತ್ತುಗಳು:**

1. ಸದರಿ ಭೂಮಿಯನ್ನು ಯಾವ ಉದ್ದೇಶಕ್ಕೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಸದರಿ ಸಂಸ್ಥೆಯು ಉಪಯೋಗಿಸತಕ್ಕದ್ದು.
2. ಗುತ್ತಿಗೆ ಆದೇಶದಲ್ಲಿ ಪ್ರಸ್ತಾಪಿತ ಜಮೀನಿನ ಗುತ್ತಿಗೆ ದರವನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು ಹಾಗೂ ಭೂ ಪರಿವರ್ತನ ಶುಲ್ಕ ಮತ್ತು ನಿಯಮಾನೂಸಾರ ಇತರೆ ಶುಲ್ಕವನ್ನು ಪಾವತಿಸಿಕೊಳ್ಳತಕ್ಕದ್ದು.
3. ಗುತ್ತಿಗೆ ಮೇಲೆ ಮಂಜೂರಾದ ಜಮೀನಿಗೆ ಸಂಸ್ಥೆಯು ಮೂರು ತಿಂಗಳ ಒಳಗೆ ಹಣವನ್ನು ಪಾವತಿಸಿ ಉದ್ದೇಶಿತ ಕಾರ್ಯಕ್ರಮಕ್ಕೆ ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು.
4. ಸದರಿ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
5. ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
6. ಸದರಿ ಗುತ್ತಿಗೆ ಆಧಾರದಲ್ಲಿ ನೀಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿ ಆದೇಶವು ನ್ಯಾಯಾಲಯದ ಅಂತಿಮ ತೀರ್ಪಿಗೆ ಒಳಪಟ್ಟಿರುತ್ತದೆ.
7. ಸದರಿ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
8. ಸದರಿ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.

9. ಸದರಿ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.

10. ಸದರಿ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

11. ಸದರಿ ಗುತ್ತಿಗೆ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

12. ಜಿಲ್ಲಾಧಿಕಾರಿಗಳು ಸದರಿ ಜಮೀನನ್ನು ಫಲಾನುಭವಿ ಸಂಸ್ಥೆಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉದಯ ಆರ್. ನಾಯಕ್**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ–2)

**PR. 90**

**SC. 25**

## ಕಂದಾಯ ಸಚಿವಾಲಯ

**ವಿಷಯ:–** ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ರಾಮನಗರ ಗ್ರಾಮದ ಸರಕಾರಿ ಪಡ ರಿ.ಸ. ನಂ.54 ರಲ್ಲಿ ಕ್ಷೇತ್ರ 0–05 ಗುಂಟೆ ಜಮೀನನ್ನು ಶ್ರೀ ಸಾತೇರಿ ದೇವಸ್ಥಾನಕ್ಕೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:–** ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪತ್ರ ಸಂ: ಪ್ರಾಆಬೆ: ಭೂಮಿ:4: ಎಲ್‌ಎನ್‌ಡಿ:ಸಿಆರ್: 97/2013–14 ದಿನಾಂಕ 26–09–2014

**ಪ್ರಸ್ತಾವನೆ:–**

ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಮೇಲೆ ಓದಲಾದ ಪತ್ರದಲ್ಲಿ ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ರಾಮನಗರ ಗ್ರಾಮದ ಸರಕಾರಿ ಪಡ ರಿ.ಸ. ನಂ.54 ರಲ್ಲಿ ಕ್ಷೇತ್ರ 0–05 ಗುಂಟೆ ಜಮೀನನ್ನು ಶ್ರೀ ಸಾತೇರಿ ದೇವಸ್ಥಾನ ಸಲುವಾಗಿ ಶ್ರೀ ಸಾತೇರಿ ದೇವಸ್ಥಾನ ವ್ಯವಸ್ಥಾಪಕ ಕಮಿಟಿ ಭಾಮಾರ್ಡೇ (ರಾಮನಗರ) ಇವರಿಗೆ ಮಂಜೂರು ಮಾಡುವ ಬಗ್ಗೆ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ ಇವರು ತಮ್ಮ ಪತ್ರದಲ್ಲಿ ಕೋರಿರುವ ಜಮೀನು ಸೂಪಾ(ಜೋಯಿಡಾ) ತಾಲ್ಲೂಕಿನ ರಾಮನಗರ (ಶೀತಾವಾಡ) ಗ್ರಾಮದ ರಿ.ಸ.ನಂ.54 ರ ಒಟ್ಟು ಕ್ಷೇತ್ರ 10–32 ಎಕರೆ ಜಮೀನು ಇದ್ದು, ಮೂಲತ ಅರಣ್ಯ ಜಮೀನಾಗಿದ್ದು ನಂತರ ಸರ್ಕಾರದ ಆದೇಶ ನಂ. ಎಫ್‌ಎಫ್‌ಡಿ–79/ಎಫ್‌ಜಿಎಲ್–79 ದಿನಾಂಕ:01–05–1980 ರನ್ವಯ ಅರಣ್ಯ ಜಮೀನು ನವೀಕರಣ ಅಧಿಸೂಚನೆ ರಲ್ಲಿ 10–32 ಗುಂಟೆ ಜಮೀನು ಸರಕಾರಿ ಪಡವೆಂದು ಪರಿವರ್ತನೆ ಹೊಂದಿರುವುದಾಗಿ ಹಾಗೂ ಕಾಲಂ.9 ರಲ್ಲಿ ದಾಖಲಾಗಿರುವುದಾಗಿ. ಮುಖ್ಯ ಅಭಿಯಂತರು ಕೆ.ಪಿ.ಸಿ ಗಣೇಶಗುಡಿ ಇವರು ಲೇಔಟ್ ನಕ್ಷೆ ತಯಾರಿಸಿದ್ದು ಅದರಂತೆ ನಿರಾಶ್ರಿತರಿಗೆ 1135 ಫ್ಲಾಟ್‌ಗಳನ್ನು ನಿರ್ಮಿಸಿ ಪುರ್ನವಸತಿ ಕಲ್ಪಸಿ ಕೊಡಲಾಗಿ ಈ ಲೇಔಟ್ ನಕ್ಷೆ ಪ್ರಕಾರ ರಾಮಲಿಂಗ ದೇವಸ್ಥಾನ, ಮಸೀದಿ ಹಾಗೂ ಚರ್ಚಗಳಿಗೆ ಪ್ಲಾಟ್ ಮೀಸಲಿಟ್ಟಿದ್ದು ಪುರ್ನವಸತಿ ಕೇಂದ್ರಗಳಲ್ಲಿ ಮಂಜೂರಿಸಿದ ಪ್ಲಾಟ್‌ಗಳನ್ನು ಹೊರತುಪಡಿಸಿ ಉಳಿದ ಖುಲ್ಲಾ ಜಾಗದಲ್ಲಿ ಹಲವಾರು ವರ್ಷಗಳ ಹಿಂದೆಯೇ ದೇವಸ್ಥಾನಗಳನ್ನು ಅನಧಿಕೃತವಾಗಿ ನಿರ್ಮಿಸಲಾಗಿದ್ದು ಎಲ್ಲಾ ದೇವಸ್ಥಾನಗಳನ್ನು ನೋಂದಣಿ ಹಾಗೂ ಮುದ್ರಾಂಕ ಇಲಾಖೆಯಲ್ಲಿ ಟ್ರಸ್ಟ್ ಡೀಡ್ ಮೂಲಕ ನೋಂದಾಯಿಸಿರುವುದಾಗಿ ತಿಳಿಸಿರುತ್ತಾರೆ. ಸದರಿ ಜಮೀನಿನ ಮಾರುಕಟ್ಟೆ ಬೆಲೆ ಪ್ರತಿ ಗುಂಟೆಗೆ ₹.49,005/– ಆಗಿದ್ದು ಶೇಕಡಾ 50% ರಷ್ಟು ಅಂದರೆ ಶ್ರೀ ಸಾತೇರಿ ದೇವಸ್ಥಾನಕ್ಕೆ ಮಂಜೂರಿಸಲು ಪ್ರಸ್ತಾಪಿಸಿದ 0–05ಗುಂಟೆ ಜಮೀನಿನ ಮಾರುಕಟ್ಟೆ ಬೆಲೆ ₹.1,22,513/– ಗಳನ್ನು ಸರಕಾರಕ್ಕೆ ಭರಣಾ ಮಾಡಿಕೊಂಡು ಈ ಕೆಳಕಂಡ ಷರತ್ತುಗಳನ್ನು ವಿಧಿಸಿ ಮಂಜೂರು ಮಾಡುವಂತೆ ಕೊರಿರುತ್ತಾರೆ.

1. ಉದ್ದೇಶಿತ ಜಮಿನನ್ನು ಯಾವ ಉದ್ದೇಶಕ್ಕಾಗಿ ಮಂಜೂರಿಸಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2. ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ನೋಡಿಕೊಳ್ಳತಕ್ಕದು.
3. ಮಾರು ಕಟ್ಟೆ ಬೆಲೆ ಶೇಕಡಾ 50 ರಷ್ಟು ಮೌಲ್ಯ ₹. 1,22,513/– ಗಳು ಹಾಗೂ ಇನ್ನಿತರ ಶುಲ್ಕಗಳ ಸಹಿತ ಸರ್ಕಾರಕ್ಕೆ ಭರಿಸುವ ಷರತ್ತಿಗೊಳಪಟ್ಟು.
4. ಮೇಲ್ಕಂಡ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸದರಿ ಜಮೀನನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗುವುದು.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 42 ಎಲ್‌ಜಿಎನ್ 2014, ದಿನಾಂಕ: 21.01.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಸಾತೇರಿ ದೇವಸ್ಥಾನ ವ್ಯವಸ್ಥಾಪಕ ಕಮಿಟಿ ಭಾಮಾರ್ಡೇ(ರಾಮನಗರ) ಇವರಿಗೆ ಉತ್ತರ ಕನ್ನಡ ಕಾರವಾರ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ರಾಮನಗರ(ಶೀತವಾಡ) ಗ್ರಾಮದ ಸ.ನಂ.54 ರಲ್ಲಿ 0–05 ಗುಂಟೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ (ತಿದ್ದುಪಡಿ) ನಿಯಮಗಳು 2015ರ ನಿಯಮ 22ಎರ ಕ್ರಮ ಸಂಖ್ಯೆ 4 ರನ್ವಯ ಮಾರ್ಗಸೂಚಿ ಬೆಲೆಯ ಶೇಕಡಾ 50% ಪಾವತಿಸಿಕೊಂಡು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಶ್ರೀ ಸಾತೇರಿ ದೇವಸ್ಥಾನಕ್ಕೆ ಮಂಜೂರು ಮಾಡಿ ಆದೇಶಿಸಿದೆ.

1. ಉದ್ದೇಶಿತ ಜಮಿನನ್ನು ಯಾವ ಉದ್ದೇಶಕ್ಕಾಗಿ ಮಂಜೂರಿಸಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸತಕ್ಕದ್ದು.
2. ಸದರಿ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ನೋಡಿಕೊಳ್ಳತಕ್ಕದು.
3. ಪ್ರಚಲಿತ ಮಾರ್ಗಸೂಚಿ ಬೆಲೆಯ ಶೇಕಡಾ 50 ರಷ್ಟು ಹಾಗೂ ಇನ್ನಿತರ ಶುಲ್ಕಗಳ ಸಹಿತ ಸರ್ಕಾರಕ್ಕೆ ಭರಿಸುವ ಷರತ್ತಿಗೊಳಪಟ್ಟು.
4. ಮೇಲ್ಕಂಡ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸದರಿ ಜಮೀನನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉದಯ ಆರ್. ನಾಯಕ್**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ–2)

**PR. 152**
**SC. 25**

## ಸಹಕಾರ ಸಚಿವಾಲಯ

**ಸರ್ಕಾರದ ಆದೇಶ ಸಇ 673 ಎಂಆರ್ಇ 2015, ಬೆಂಗಳೂರು, ದಿನಾಂಕ: 11/01/2016.**

**ವಿಷಯ:–** ರೈತ ಸಂಜೀವಿನಿ ಯೋಜನೆಗೆ ತಿದ್ದುಪಡಿ ಮಾಡುವ ಬಗ್ಗೆ–ಆದೇಶ.

**ಓದಲಾಗಿದೆ:–**
1. ಸರ್ಕಾರದ ಆದೇಶ ಸಂ: ಸಇ 157 ಎಂಆರ್ಇ 2014, ದಿನಾಂಕ: 23.07.2014.
2. ರೈತ ಸಂಜೀವಿನಿ ಅಪಘಾತ ವಿಮಾ ಪರಿಹಾರವನ್ನು ಹೆಚ್ಚಿಸುವ ಕುರಿತು ದಿ: 20.10.2015ರಂದು ನಡೆದ ನಡವಳಿಯ ಉದ್ಧೃತ ಭಾಗ
3. ಮುಖ್ಯ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿ ಇವರ ಪತ್ರ ಸಂಖ್ಯೆ: ಕೃಮಾಮಂ/7981/2015–16, ದಿನಾಂಕ: 23.11.2015.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 23.07.2014ರ ಸರ್ಕಾರಿ ಆದೇಶದಲ್ಲಿ ದಿ: 01.04.2001ರಿಂದ ಜಾರಿಗೆ ತಂದಿರುವ ರೈತ ಸಂಜೀವಿ ಅಪಘಾತ ವಿಮೆ ಪರಿಷ್ಕೃತ ಯೋಜನೆಯನ್ನು ಮರು ಪರಿಷ್ಕ್ರತ ರೈತ ಸಂಜೀವಿನಿ ನಿಯಮಗಳನ್ನು ದಿನಾಂಕ: 05.07.2014 ರಿಂದ ಅನ್ವಯವಾಗುವಂತೆ ಜಾರಿಗೆ ತರಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿ: 20.10.2015ರಂದು ನಡೆದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಯ ಪ್ರಧಾನ ಸಭೆಯಲ್ಲಿ ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಶಾಸನ 1966ರ ಕಲಂ 112(ಜಿ) ಅನ್ವಯ ರೈತರಿಗೆ ವಿಮೆಯನ್ನು ಒದಗಿಸುವುದು ಮುಖ್ಯ ಕರ್ತವ್ಯಗಳಲ್ಲಿ ಒಂದಾಗಿದ್ದು, ಪ್ರಸ್ತುತ ರೈತರು ಕೃಷಿ ಚಟುವಟಿಕೆಯಲ್ಲಿ ತೊಡಗಿರುವಾಗ ಸಾವು ಉಂಟಾದಾಗ ₹.75,000/– ವಿಮಾ ಹಣವನ್ನು ಪಾವತಿಸಲಾಗುತ್ತಿದ್ದು, ಸದರಿ ವಿಷಯವನ್ನು ಕೂಲಂಕುಷವಾಗಿ ಚರ್ಚಿಸಿ, ಸಾವು ಉಂಟಾದಾಗ ಪಾವತಿಸಲಾಗುತ್ತಿರುವ ವಿಮಾ ಮೊತ್ತವನ್ನು ₹. 1,00.000/–ಗಳಿಗೆ ಹೆಚ್ಚಿಸಲು ಮತ್ತು ಈ ಕುರಿತು ಸೂಕ್ತ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಿ, ಶೀಘ್ರದಲ್ಲಿ ಅನುಮೋದನೆಯನ್ನು ಪಡೆಯಲು ತೀರ್ಮಾನಿಸಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಮುಖ್ಯ ಪ್ರಧಾನ ವ್ಯವಸ್ಥಾಪಕರು, ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿ ಇವರ ದಿನಾಂಕ: 23.11.2015ರ ಪತ್ರದಲ್ಲಿ ಮಾನ್ಯ ತೋಟಗಾರಿಕೆ ಮತ್ತು ಕೃಷಿ ಮಾರುಕಟ್ಟೆ ಸಚಿವರು ಹಾಗೂ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಯ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ದಿ: 20.10.2015ರಂದು ಜರುಗಿದ ಮಂಡಳಿಯ ಪ್ರಧಾನ ಸಭೆಯ ವಿಷಯ ಸಂ:9(ಆ) ರಡಿಯಲ್ಲಿ ಚರ್ಚಿಸಿ ನಿರ್ಣಯಿಸಿದಂತೆ ರೈತ ಸಂಜೀವಿನಿ ಅಪಘಾತ ವಿಮಾ ಪರಿಹಾರ ಕುರಿತು ತಿದ್ದುಪಡಿ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ರೈತ ಸಂಜೀವಿನಿ ಅಪಘಾತ ವಿಮಾ ಪರಿಹಾರ ಯೋಜನೆಯನ್ನು ಪರಿಷ್ಕೃತಗೊಳಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

### ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ರೈತ ಸಂಜೀವಿನಿ ಅಪಘಾತ ವಿಮಾ ಯೋಜನೆಯ ಪರಿಹಾರ ಯೋಜನೆಯಲ್ಲಿ ರೈತರು ಕೃಷಿ ಚಟುವಟಿಕೆಯಲ್ಲಿ ತೊಡಗಿರುವಾಗ ಸಾವು ಉಂಟದಾಗ ಪ್ರಸ್ತುತ ಪಾವತಿಸಲಾಗುತ್ತಿರುವ ವಿಮಾ ಹಣವನ್ನು ₹.75,000/–ರಿಂದ ₹.1,00,000/– ಗಳಿಗೆ ಹೆಚ್ಚಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್ ಸಿ. ಬಸವರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ–1

ಸಹಕಾರ ಇಲಾಖೆ.

**PR. 84**

## ಕಂದಾಯ ಸಚಿವಾಲಯ

**ವಿಷಯ:–** ಬೆಂಗಳೂರು ಪೂರ್ವ ತಾಲ್ಲೂಕು ವರ್ತೂರು ಹೋಬಳಿ ಮತ್ತು ವರ್ತೂರು ಗ್ರಾಮದ ಸರ್ವೆ ನಂಬರ್ 170ರಲ್ಲಿ 1–07ಎಕರೆ/ಗುಂಟೆ ಖರಾಬು ಕುಂಟೆ ಜಮೀನನ್ನು ದೋಬಿ ಘಾಟ್, ಲಿಂಗಾಯಿತ ಸ್ಮಶಾನ ಮತ್ತು ವಿಶ್ವಕರ್ಮ ಸ್ಮಶಾನಕ್ಕಾಗಿ ಮೀಸಲಿಡುವ ಬಗ್ಗೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಓದಲಾಗಿದೆ:–**
1. ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್ಎನ್‌ಡಿ (ಪೂ) ಸಿಆರ್.196/11–12, ದಿನಾಂಕ: 07.05.2012 ಮತ್ತು ದಿನಾಂಕ: 07.03.2013.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್.ಡಿ 398 ಎಲ್.ಜಿ.ಬಿ. 2012 ದಿನಾಂಕ: 31.07.2012.
3. ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ ಇವರ ಕಾರ್ಯಾಲಯದ ಅಧಿಸೂಚನೆ ಸಂಖ್ಯೆ: ಎಲ್ಎನ್‌ಡಿ.ಸಿಆರ್: 278/11–12, ದಿನಾಂಕ: 30.09.2012.
4. ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್.ಡಿ 398 ಎಲ್.ಜಿ.ಬಿ. 2012 ದಿನಾಂಕ: 16.09.2013.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಪತ್ರದಲ್ಲಿ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ವರ್ತೂರು ಗ್ರಾಮದ ಸರ್ವೆ ನಂಬರ್ 170ರಲ್ಲಿ 1–07 ಎಕರೆ/ಗುಂಟೆ ಸರ್ಕಾರಿ ಖರಾಬು ಕುಂಟೆ ಜಮೀನಿದ್ದು, ಇದು ಕುಂಟೆ ಲಕ್ಷಣಗಳನ್ನು ಮತ್ತು ಅಸ್ಥಿತ್ವವನ್ನು ಕಳೆದುಕೊಂಡಿದ್ದು, ಸ್ವಾಭಾವಿಕವಾಗಿ ಮಣ್ಣು ತುಂಬಿಕೊಂಡು ಸಮತಟ್ಟಾಗಿರುತ್ತದೆ. ಈ ಜಮೀನಿನ ಪೈಕಿ 0–12.08 ಗುಂಟೆ ಜಮೀನನ್ನು ಲಿಂಗಾಯಿತ ಸ್ಮಶಾನಕ್ಕೆ 0–12.08 ಗುಂಟೆ ಜಮೀನನ್ನು ವಿಶ್ವಕರ್ಮ ಸ್ಮಶಾನಕ್ಕೆ ಮತ್ತು 0–20 ಗುಂಟೆ ಜಮೀನನ್ನು ದೋಬಿ ಘಾಟ್ ಉದ್ದೇಶಕ್ಕಾಗಿ ಕಾಯ್ದಿರಿಸಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 68(1) ಮತ್ತು 68(5)ರಡಿ ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಅದರಂತೆಯೇ ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಸರ್ಕಾರವು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 68(1)ರಡಿ ಪ್ರಕಟಣೆ ಹೊರಡಿಸಲು ಪೂರ್ವಾನುಮೋದನೆ ನೀಡಿದೆ. ಅದರಂತೆ ಕ್ರಮ ಸಂಖ್ಯೆ: (3)ರಲ್ಲಿ ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಕೆ.ಆರ್. ಪುರ ಇವರು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 68(1)ರಡಿ ದಿನಾಂಕ: 08.11.2012ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಅಧಿಸೂಚನೆಯನ್ನು ಪ್ರಕಟಿಸಿ ಸಾರ್ವಜನಿಕರಿಂದ ಆಕ್ಷೇಪಣೆಗಳನ್ನು ಸಲ್ಲಿಸಲು ಕಾಲಾವಕಾಶವನ್ನು ನೀಡಿರುತ್ತಾರೆ. ಈ ಅವಧಿಯಲ್ಲಿ ಯಾವುದೇ ತಂಟೆ ತಕಾರರು ಸ್ವೀಕೃತವಾಗದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ: (4)ರಲ್ಲಿ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 68(5)ರಡಿ ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ಅಂತಿಮ ಅಧಿಸೂಚನೆಯನ್ನು ಹೊರಡಿಸಲಾಗಿದ್ದು, ದಿನಾಂಕ: 16.01.2014ರಂದು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡಿರುತ್ತದೆ.

ಮೇಲೆ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್ ಡಿ 398 ಎಲ್‌ಜಿಬಿ 2012, ಬೆಂಗಳೂರು, ದಿನಾಂಕ: 01.01.2016.**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ ಮತ್ತು ವರ್ತೂರು ಗ್ರಾಮದ ಸರ್ವೆ ನಂಬರ್ 170ರಲ್ಲಿ 1–07 ಎಕರೆ/ಗುಂಟೆ ಸರ್ಕಾರಿ ಖರಾಬು ಕುಂಟೆ ಜಮೀನಿನ ಪೈಕಿ 0–12.08 ಗುಂಟೆ ಜಮೀನನ್ನು ಲಿಂಗಾಯಿತ ಜನಾಂಗದ ಸ್ಮಶಾನಕ್ಕೆ 0–12.08 ಗುಂಟೆ ಜಮೀನನ್ನು ವಿಶ್ವಕರ್ಮ ಜನಾಂಗದ ಸ್ಮಶಾನಕ್ಕೆ ಮತ್ತು 0–20 ಗುಂಟೆ ಜಮೀನನ್ನು ದೋಬಿ ಘಾಟ್‌ಗೆ ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಪ್ರಕರಣ 71ರಡಿ ಕಾಯ್ದಿರಿಸಲು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ–1)

**PR. 105**
**SC. 50**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59